# ತಿರುಮಲೆಯಲ್ಲಿನ ಸೌಕರ್ಯಗಳು




## ಕಾಲುಹಾದಿಯಲ್ಲಿ ಬೆಟ್ಟವನ್ನೇರುವವರಿಗೆ ಇರುವ ಸೌಕರ್ಯಗಳು

ಅಸಂಖ್ಯಾತ ಯಾತ್ರಿಕರು ತಮ್ಮ ಹರಕೆಯ ಭಾಗವಾಗಿ ತಿರುಮಲೆಯನ್ನು ಕಾಲುಹಾದಿಯ ಮೂಲಕ ಏರಿ ತಲುಪುತ್ತಾರೆ ಅವರ ಅನುಕೂಲಕ್ಕಾಗಿ ತಿ ತಿ ದೇ ಗಳು ಹಲವು ಸೌಕರ್ಯಗಳನ್ನುಂಟಾಗಿಸಿವೆ

* ಬೆಟ್ಟವನ್ನು ಹತ್ತುವ ಯಾತ್ರಿಕರಿಗಾಗಿ ತಿರುಪತಿಯ ರೈಲ್ವೆ ನಿಲ್ದಾಣದಿಂದ ಕೇಂದ್ರ ಬಸ್‌ನಿಲ್ದಾಣ ಕಪಿಲತೀರ್ಥಗಳ ಮೂಲಕ ಹಾದು ಅಲಿಪಿರಿಯನ್ನು ತಲುಪುವಂತೆ ಎರಡು ಬಸ್‌ಗಳನ್ನು ಉಚಿತವಾಗಿ ಹೊರಡಿಸಲಾಗುತ್ತಿದೆ ಈ ಉಚಿತ ಪ್ರಯಾಣದ ಬಸ್‌ಗಳು ಬೆಳಗ್ಗೆ 4-00 ಗಂಟೆಯಿಂದ ರಾತ್ರಿ 11-00 ಗಂಟೆಯವರೆಗೆ ಅರವತ್ನಾಲ್ಕು ಬಾರಿ ನಡೆಯುತ್ತವೆ
* ತಿರುಪತಿಯ ಸತ್ರಗಳಿಂದ / ಅಲಿಪಿರಿಯಿಂದ ತಿರುಮಲೆಗೆ ಯಾತ್ರಿಕರ ಸಾಮಾನುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು
* ಗಾಳಿಗೋಪುರ, ಚೆಟ್ಟಿಯೆಕ್ಕುಡು, ಮಾಮಂಡೂರು ಮಿಟ್ಟ, ನರಸಿಂಹಸ್ವಾಮಿ ಗುಡಿ, ಮೊಣಕಾಲು ಮುರಿ ಮೊದಲಾದೆಡೆಗಳಲ್ಲಿ ಅಡಿಗೆ ಮಾಡಿಕೊಳ್ಳುವ ಏರ್ಪಾಡು
* ಕಾಲುಹಾದಿಯುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ
* ಕಾಲುಹಾದಿಯಲ್ಲಿ ಶೌಚಗೃಹಗಳೂ ಉಂಟು
* ಮುಖ್ಯವಾದ ಆಯಕಟ್ಟಿನ ಸ್ಥಳಗಳಲ್ಲಿ ವಿಶ್ರಾಂತಿ ಪಡೆಯಲು ನೆರಳಿನ ವ್ಯವಸ್ಥೆ
* ವಂಚಕರು, ಮೋಸಗಾರರ ಪಾಲಿಗೆ ಸಿಕ್ಕಿ ಯಾತ್ರಿಕರು ವಂಚಿತರಾಗದಂತೆ ನೋಡಿಕೊಳ್ಳಲು ಹಗಲು ರಾತ್ರಿ ಸಂರಕ್ಷಕ ಬಟರ, ಗೂರ್ಖಾಗಳ, ಪೋಲೀಸರ ಕಾವಲು ಪಹರೆ
* ಸ್ಥಳೀಯ ಪ್ರಸಾರ ಪದ್ಧತಿಯಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರ

## ಸರದಿಯ ಸಾಲಿನಲ್ಲಿ ಯಾತ್ರಿಕರ ಸೌಲಭ್ಯಗಳು

ಸರದಿಯ ಸಾಲಿನ ಕೋಣೆಗಳಲ್ಲಿ ಸ್ವಾಮಿಯ ದರ್ಶನಕ್ಕೆಂದು ಯಾತ್ರಿಕರು ಕಾಯುವ ಸಮಯವನ್ನು ಕಡಿಮೆ ಮಾಡುವಂತಹ ಅನೇಕ ಹೊಸಹೊಸ ಕ್ರಮಗಳನ್ನು ತಿ ತಿ ದೇವಸ್ಥಾನಗಳು ಆಲಯದ ದೈನಂದಿನ ಸೇವೆಗಳಲ್ಲಿ ಪ್ರವೇಶಗೊಳಿಸಿವೆ ಜೊತೆಗೇ ಕಾಯುವ ಕೋಣಗಳಲ್ಲಿ ಯಾತ್ರಿಕರಿಗೆ ಬೇಸರವಾಗದಂತೆ ಅವರ ಮನಸ್ಸಿಗೆ ಉಲ್ಲಾಸವಾಗುವಂತೆ ಈ ಕೆಲವು ಕ್ರಮಗಳನ್ನೂ ಕೈಗೊಳ್ಳಲಾಗಿದೆ

* ಗಾಳಿ ಬೆಳಕುಗಳ ವಿಶಾಲವಾದ ಆರೋಗ್ಯಕರವಾದ ವಿದ್ಯುತ್ ಪಂಖಗಳಿಂದ ಕೂಡಿದ ಕಾಯುವ ಕೋಣೆಗಳು
* ತಿ ತಿ ದೇ ಕ್ಯಾಂಟೀನಿನಿಂದ ಒಳಗಡೆ ಅಲ್ಪೋಪಹಾರ ಸೌಲಭ್ಯ
* ಆಹಾರದ ಪೊಟ್ಟಣಗಳು ಸರಸವಾದ ದರಗಳಲ್ಲಿ ಸಿಗುವ ಏರ್ಪಾಡು
* ಆಂಧ್ರಪ್ರದೇಶ ಡೈರಿ ಅಭಿವೃದ್ಧಿ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಪ್ರಥಮ ಚಿಕಿತ್ಸೆ
* ಸರದಿಯ ಸಾಲಿನ ಕೋಣೆಗಳಲ್ಲಿ ಶೌಚಗೃಹ ವ್ಯವಸ್ಥೆ
* ಕ್ಲೋಸ್ಡ್ ಸರ್ಕ್ಯೂಟ್ ಟಿ ವಿ ಕಾರ್ಯಕ್ರಮಗಳು
* ಭಕ್ತಿ ಸಂಗೀತ, ಹರಿಕಥೆ ಮೊದಲಾದವುಗಳ ಪ್ರಸಾರ
* ವೈಕುಂಠಂ ಕ್ಯೂಕಾಂಪ್ಲೆಕ್ಸ್ ಸಮೀಪದಲ್ಲಿ ಯಾತ್ರಿಕರು ತಮ್ಮ ವಸ್ತುಗಳನ್ನು ಸುರಕ್ಷಿತಗೊಳಿಸಬಹುದು ಸರದಿಯ ಸಾಲಿನಲ್ಲಿ ನಡೆಯುತ್ತ ಸರಂಜಾಮುಗಳನ್ನು ಹೊತ್ತು ನಡೆಯಬೇಕಾಗಿಲ್ಲ
* ಸರದಿಯ ಸಾಲಿಗೆ ಸೇರುವ ಸ್ಥಳಗಳಲ್ಲಿ ಪಾದರಕ್ಷೆಗಳನ್ನು ಬದ್ರಪಡಿಸುವ ಸೌಲಭ್ಯವಿದೆ
* ವಂಚಕ ದಳ್ಳಾಳಿಗಳಿಂದ ಉದ್ಯೋಗಿಗಳ ಭ್ರಷ್ಟತೆಯನ್ನು ನಿವಾರಿಸಲು ಆಲಯದ ಮಹಾದ್ವಾರದಲ್ಲಿ ಒಬ್ಬ ಅದಿಕಾರಿಯ ನೇಮಕ ಇವರು ದೂರುಗಳನ್ನೂ ವಿಚಾರಿಸುವರು
* ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರ ಅನುಕೂಲಗಳನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯ ನೇಮಕ

## ಇತರ ಸೌಲಭ್ಯಗಳು .

* ತಿರುಪತಿಯ ತಿರುಚಾನೂರು ರಸ್ತೆಯಲ್ಲಿನ ಶ್ರೀನಿವಾಸ ಕಲ್ಯಾಣ ಮಂಟಪಗಳಲ್ಲಿ ನಾಲ್ಕು ಮದುವೆಯ ಮಂಟಪಗಳಿದ್ದು ಇಲ್ಲಿ ಗ್ಯಾಸ್ ಒಲೆ ಮೊದಲಾದ ಆಧುನಿಕ ಸೌಲಭ್ಯಗಳುಂಟು ಸರಸವಾದ ಸೇವಾಶುಲ್ಕದ ಈ ಕಲ್ಯಾಣಮಂಟಪಗಳ ಬಾಡಿಗೆಯ ಕಾಲವ್ಯವಧಿ ಮಧ್ಯಾಹ್ನ 3 ರಿಂದ ಮದ್ಯಾಹ್ನ 3 ಗಂಟೆ ಶ್ರೀನಿವಾಸಕಲ್ಯಾಣ ಮಂಟಪದ ಎದುರು ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳ ಸಮುದಾಯದಲ್ಲಿ ಹೆಚ್ಚು ಕಲ್ಯಾಣ ಮಂಟಪಗಳುಂಟು

  ಎಸ್.ವಿ ಅತಿಥಿಗೃಹ ಕ್ಯಾಂಟೀನ್ ತಿರುಮಲೆಯ ಎಸ್ ವಿ ಅತಿಥಿಗೃಹದ ಕ್ಯಾಂಟೀನ್‌ನಲ್ಲಿ ಸರಸದರಗಳಲ್ಲಿ ಆರೋಗ್ಯಕರವಾದ ಸಂತುಲಿತ ಊಟ ಉಪಹಾರಗಳು ದೊರೆಯುತ್ತವೆ

  ಉಚಿತ ಭೋಜನ ಸ್ವಾಮಿಯನ್ನು ದರ್ಶಿಸಿ ಹೊರಬರುವಾಗ ಆಲಯದಲ್ಲಿ ನೀಡಲಾಗುವ ಉಚಿತ ಭೋಜನ ಚೀಟಿಗಳ ವಿತರಣೆಯ ಮೂಲಕ ತಿರುಮಲೆಯ ತಿ ತಿ ದೇ ಕ್ಯಾಂಟೀನ್‌ನಲ್ಲಿ ಬೆಳಗ್ಗೆ 10-00 ಗಂಟೆಯಿಂದ ರಾತ್ರಿ 1-00 ಗಂಟೆಯವರೆಗೆ ಉಚಿತವಾಗಿ ಸಂತುಲಿತ ಬೋಜನ ನೀಡಲಾಗುತ್ತದೆ

  ಉಚಿತ ವೈದ್ಯಕೀಯ ಚಿಕಿತ್ಸೆ ಶೇಷಾದ್ರಿನಗರದ ಬಳಿಯ ಅಶ್ವಿನಿ ಆಸ್ಪತ್ರೆಯಲ್ಲಿ ಯಾತ್ರಿಕರಿಗೆ ಉಚಿತವಾಗಿ ವೈದ್ಯ ಸೌಲಭ್ಯ ದೊರೆಯುತ್ತದೆ

  ಅಂಚೆ ಮತ್ತು ತಂತಿ ಕೇಂದ್ರ ಸ್ವಾಗತಕಚೇರಿಯ ಬಳಿ ಅಂಚೆ ಕಚೇರಿ, ತಂತಿ ಕಚೇರಿಗಳಿವೆ

  ಉಚಿತ ಬಸ್ ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು, ಆಲಯ ಮೊದಲಾದವನ್ನು ಮುಟ್ಟುವಂತೆ ಉಚಿತ ಬಸ್‌ಗಳ ಓಡಾಡುತ್ತವೆ

  ಏರ್‌ಲೈನ್ಸ್‌ಕೋಚು ತಿರುಪತಿಯ ಬಳಿಯ ವಿಮಾನ ನಿಲ್ದಾಣದಿಂದ ತಿರುಮಲೆಗೆ ಹಾಗೂ ಹಿಂದಕ್ಕೆ ವಿಮಾನಯಾತ್ರಿಕರ ಅನುಕೂಲಕ್ಕಾಗಿ ಎ ಪಿ ಎಸ್ ಆರ್ ಟಿ.ಸಿ ಯವರು ಲಕ್ಸುರಿ ಕೋಚನ್ನು ನಡೆಸುತ್ತಾರೆ

  ಚಿನ್ನ ಹಾಗೂ ಬೆಳ್ಳಿ ಪದಕಗಳ ಮಾರಾಟ ತಿರುಮಲೆಯ ಆಲಯದ ಒಳಗಡೆ ಸ್ವಾಮಿಯ ಹುಂಡಿಯ ಎದುರು ಭಾಗದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಚಿನ್ನ ಹಾಗೂ ಬೆಳ್ಳಿಯ ಪದಕಗಳನ್ನು ಕೊಂಡುಕೊಳ್ಳಬಹುದು

  ಕಲ್ಯಾಣಕಟ್ಟೆ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರು ತಮ್ಮ ಹರಕೆಯ ಕೂದಲನ್ನು ಉಚಿತವಾಗಿ ನೀಡಬಹುದು ಕಾಟೇಜುಗಳ ಬಳಿಯಲ್ಲಿ ಇದಕ್ಕೆ 10 ರೂಪಾಯಿ ಶುಲ್ಕ

  ಪ್ರಕಟನೆಗಳ ಮಾರಾಟ ತಿರುಮಲೆಯ ಆರ್ ಟಿ.ಸಿ ಬಸ್ ನಿಲ್ದಾಣದಲ್ಲಿ ಹಾಗೂ ತಿರುಪತಿಯಲ್ಲಿನ ಮೊದಲಸತ್ರ, ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಳಿಯ ಧ್ಯಾನಮಂದಿರ, ರೈಲ್ವೆ ನಿಲ್ದಾಣಗಳಲ್ಲಿ ತಿ ತಿ ದೇವಸ್ಥಾನಗಳು ಪ್ರಕಟಿಸುವ ಎಲ್ಲ ಗ್ರಂಥಗಳು, ಧ್ವನಿಸುರುಳಿಗಳು, ದೊರೆಯುತ್ತವೆ

  ರೈಲ್ವೆ ಮುಂಗಡ ಕಾಯ್ದಿರಿಸುವಿಕೆ ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿರುವ ರೈಲ್ವೆ ಕೌಂಟರಿನಲ್ಲಿ ಬಸ್ - ರೈಲು ಪ್ರಯಾಣಗಳನ್ನು ಮುಂಗಡ ಕಾಯ್ದಿರಿಸಬಹುದು

  ವಾಹನ ದುರಸ್ತಿ ತಿರುಮಲೆಯ ಹಾದಿಯಲ್ಲಿ ಕಟ್ಟು ನಿಲ್ಲುವ ವಾಹನಗಳ ದುರಸ್ತಿಗಾಗಿ ಒಂದು ದುರಸ್ತಿ ವಾಹನವು ಮೆಕ್ಯಾನಿಕ್ ಹಾಗೂ ಉಪಕರಣಗಳೊಂದಿಗೆ ಸಿದ್ಧವಾಗಿರುತ್ತದೆ ತಿರುಪತಿಯ ಅಲಿಪಿರಿ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿ ವಿಚಾರಿಸಿ ಈ ಸೌಲಭ್ಯ ಪಡೆಯಬಹುದು

  ಪುರೋಹಿತ ಸಂಘ ತಿರುಮಲೆಯಲ್ಲಿ ವೈದಿಕ ಕ್ರಿಯೆಗಳನ್ನು ಯಾತ್ರಿಕರು ನಡೆಸಲು ಸುಲಭವಾಗುವಂತೆ, ಈ ಕಲಾಪಗಳನ್ನು ನಿರ್ವಹಿಸಬಲ್ಲ ಪಾಂಡಿತ್ಯ ಅನುಭವಗಳನ್ನುಳ್ಳ ಪುರೋಹಿತರ ಸಂಘವನ್ನು ತಿ ತಿ ದೇ ಸಂಘಟಿಸಿದ ಸವರಿ ಕ್ರಿಯೆಗಳ ಶುಲ್ಕವನ್ನೂ ತಿ ತಿ ದೇ ನಿರ್ಧರಿಸಿ ಪ್ರಕಟಿಸಿದ ಸಂಕಲ್ಪ, ನಾಮಕರಣ, ಚೌಲ, ಉಪನಯನ, ವಿವಾಹ, ಪಿಂಡಪ್ರದಾನ ಮೊದಲಾದ ವೈದಿಕ ಕ್ರಿಯೆಗಳನ್ನು ಮಾಡಬಯಸುವವರು ಪುರೋಹಿತ ಸಂಘದಲ್ಲಿ ವಿಚಾರಿಸಬಹುದು ತಿ ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಬಹುದು



ಗುರುವಿನ ಗುಲಾಮನಾಗದನಕ
ದೊರೆಯದಣ್ಣ ಮುಕುತಿ
ಪರಿಪರಿ ಶಾಸ್ತ್ರವನೇಕವನೋದಿ
ವ್ಯರ್ಥವಾಯಿತು ಭಕುತಿ

ಆರು ಶಾಸ್ತ್ರವನೋದಿದರಿಲ್ಲ ಮೂ
ರಾರು ಪುರಾಣವ ಮುಗಿಸಿದರಿಲ್ಲ
ಸಾರಿ ಸಜ್ಜನರ ಸಂಗವ ಮಾಡದೆ
ಧೀರನಾಗಿ ತಾಮೆರೆದರೆ ಇಲ್ಲ
ಕೊರಳೊಳು ಮಾಲೆಯ ಧರಿಸಿದರಿಲ್ಲ
ದೆರಳೊಳು ಜಪಮಣಿ ಎಣಿಸಿದರಿಲ್ಲ
ಮರುಳನಂತೆ ಶರೀರಕ್ಕೆ ಬೂದಿಯ
ಒರೆಸಿಕೊಂಡು ತಾ ತಿರುಗಿದರಿಲ್ಲ
ನಾರಿಯ ಭೋಗ ಅಳಿಸಿದರಿಲ್ಲ
ಶರೀರಕೆ ಸುಖವ ಬಿಡಿಸಿದರಿಲ್ಲ
ನಾರದ ವರದ ಪುರಂದರ ವಿಠಲನ
ಮರೆಯದೆ ಮನದೊಳು ದೆರೆಯುವ ತನಕ

- ಶ್ರೀ ಪುರಂದರದಾಸರು.



# ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.

# ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆ

ಭಕ್ತರ ಹಾಗೂ ದಾನಿಗಳ ದಾನಸ್ವೀಕರಣೆಯಿಂದ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಯನ್ನು ಆರಂಭಗೊಳಿಸಲಾಗಿದೆ

ಈ ಯೋಜನೆಗೆ ದಾನ ನೀಡಬಯಸುವ ಭಕ್ತರು ರೂ 50,000/- ಅಥವಾ ಅದರ ಗುಣಕಗಳಲ್ಲಿ ನೀಡಬಹುದು ವ್ಯಕ್ತಿ/ಇಬ್ಬರಿಗೆ ಮೀರದಂತೆ, ಒಂದು ಕುಟುಂಬ / ಎರಡು ಕಂಪನಿ ಅಥವಾ ಉದ್ದಿಮೆಗಳು - ಈ ದಾನಗಳನ್ನು ನೀಡಬಹುದು ಅವರಿಗೆ ದೊರೆಯುವ ಸೌಲಭ್ಯಗಳು ಹೀಗಿರುತ್ತವೆ-

1. **ದಾನಿಗಳ ಹೆಸರನ್ನು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷ ಗಳು ಪ್ರಧಾನವಾಗಿ ಎದ್ದು ಕಾಣುವಂತೆ ಬರೆದು ಇಡಲಾಗುವುದು.**
2. **ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಅರ್ಚನೆಯ ಸಮಯದಲ್ಲಿ ದಾನಿಗಳ ಗೋತ್ರವನ್ನು ಹೇಳಲಾಗುವುದು**
3. **ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಂದು ಸಲ ಸರ್ವದರ್ಶನ ಸಮಯದಲ್ಲಿ ವಿಶೇಷ ಪ್ರವೇಶದ ಮೂಲಕ ಐದುಮಂದಿಗೆ ಉಚಿತ ದರ್ಶನವನ್ನು ಏರ್ಪಡಿಸಲಾಗುವುದು.**
4. **ದಾನಿಗಳು ಮೊದಲಬಾರಿಗೆ ಶ್ರೀ ಪದ್ಮಾವತೀ ಅಮ್ಮನವರನ್ನು ದರ್ಶಿಸಲು ಬಂದಾಗ ಅವರಿಗೆ ಒಂದು ಅಂಗವಸ್ತ್ರವನ್ನು ಬಹೂಕರಿಸಲಾಗುವುದು.**

ಭಕ್ತರು ರೂ 1000/- (ಒಂದು ಸಾವಿರ ರೂಪಾಯಿ) ಹಾಗೂ ಗುಣಕಗಳಲ್ಲಿ ಸಹ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಗೆ ದಾನಗಳನ್ನು ನೀಡಬಹುದು ಅವರಿಗೆ ವರ್ಷಕ್ಕೆ ಒಮ್ಮೆ ಒಬ್ಬರಿಗೆ ಉಚಿತ ದರ್ಶನವನ್ನು ಏರ್ಪಡಿಸಿ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದದೊಡನೆ ಕುಂಕುಮ ಪ್ರಸಾದವನ್ನು ನೀಡಲಾಗುವುದು

ಈ ಯೋಜನೆಗೆ ದಾನವಾಗಿ ನೀಡಬಹುದಾದ ಕನಿಷ್ಠ ಧನರಾಶಿ ಯೆಂದರೆ ರೂ 1000/- (ಒಂದು ಸಾವಿರ ರೂಪಾಯಿ) ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ **ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ. ತಿರುಪತಿ** ಇವರ ಹೆಸರಿನಲ್ಲಿ ಡಿ ಡಿ ಯನ್ನು ಪಡೆದು, **ಸಹಾಯಕ ಕಾರ್ಯನಿರ್ವಹಣಾಧಿಕಾರಿ, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಚಿತ್ತೂರುಜಿಲ್ಲೆ - 517 503** - ಈ ವಿಳಾಸಕ್ಕೆ ಕಳುಹಿಸಬಹುದು ರೂ. 1000/- ಕ್ಕಿಂತ ಕಡಿಮೆ ಮೊತ್ತದ ಧನದಾನಗಳನ್ನು ದಾನಿಗಳಿಗೆ ಯಾವುದೇ ನಿರೂಪಣೆಯನ್ನೂ ನೀಡದೆ ಶ್ರೀ ಪದ್ಮಾವತೀ ಅಮ್ಮನವರ ನಿತ್ಯಾನ್ನ ಪ್ರಸಾದ ಯೋಜನೆಯಲ್ಲಿ ಸೇರಿಸಲಾಗುವುದು.

*ಈ ಯೋಜನೆಯ ಹೆಚ್ಚಿನ ವಿವರಗಳನ್ನು ಪಡೆಯಬಹುದಾದ ವಿಳಾಸ -*

**ಸಹಾಯಕ ಕಾರ್ಯನಿರ್ವಹಣಾಧಿಕಾರಿ**
ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
**ತಿರುಚಾನೂರು - 517 503**
**ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ್**

**ಕಾರ್ಯನಿರ್ವಹಣಾಧಿಕಾರಿ,**
**ತಿ. ತಿ. ದೇವಸ್ಥಾನಗಳು.**




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ಜುಲೈ 1999 ಸಂಚಿಕೆ - 2



ಮುಖಚಿತ್ರ ದಕ್ಷಿಣಾಮೂರ್ತಿ - ಚಿತ್ರ - ಡಾ॥ ಕೆ ಜಗದೀಶ್

ಹಿಂಬದಿಯಲ್ಲಿ ಶ್ರೀನಿವಾಸ ಮಂಗಾಪುರದ ಆಲಯ ಮಹಾದ್ವಾರ ಗೋಪುರ


ಗೌರವ ಸಂಪಾದಕರು
ಡಾ॥ ಐ ವಿ. ಸುಬ್ಬಾರಾವ್, ಐ.ಎ.ಎಸ್,
ಕಾರ್ಯನಿರ್ವಹಣಾಧಿಕಾರಿ,
ತಿ ತಿ ದೇ ತಿರುಪತಿ

ಸಂಪಾದಕ
ಡಾ॥ ಎನ್ ಎಸ್ ರಾಮಮೂರ್ತಿ,

ಉಪಸಂಪಾದಕ
ಬಿ ಎನ್ ಶ್ರೀನಿವಾಸನ್, ಎಂ.ಎ

ಮುದ್ರಣ
ಎಂ ಲಕ್ಷ್ಮಣ್‌ರಾವ್, ಎಂ.ಎ, ಎಲ್ ಟಿ.ಟಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ.ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ - ಸಂ॥




ಹಣವನ್ನು ಹಂಚಿಕೊಂಡರೆ ಕಡಮೆಯಾಗುತ್ತದೆ ಕಾರಣ ಅದೊಂದು ವಸ್ತು, ಅಳತೆಗೆ ಒಳಪಡುವ ದ್ರವ್ಯರಾಶಿ ನೋವು ದುಃಖಗಳನ್ನು ಹಂಚಿಕೊಂಡರೆ ಕಡಮೆಯಾಗುವುವು - ಇವು ದ್ರವ್ಯರಾಶಿ ಆಗದಿದ್ದರೂ ಕೂಡ ಇದರಂತೆಯೇ ಇದರ ವಿರುದ್ಧವಾದರೂ ಧನಾತ್ಮಕವಾದ ಗುಣವೆಂದರೆ ಸುಖ, ಸಂತೋಷ ಇವುಗಳು ಹಂಚಿಕೊಂಡರೆ ಹೆಚ್ಚಾಗುತ್ತವೆ ಈ ಹಿನ್ನೆಲೆಯಲ್ಲಿ ಮನುಷ್ಯನ ಮೂಲಭೂತ ಮೇಲ್ಮೆಯ ಲಕ್ಷಣವಾದ ಜ್ಞಾನ ಅಜ್ಞಾನಗಳ ಬಗ್ಗೆ ತಿರುಗಿ ಯೋಚಿಸ ಹೊರಟರೆ ಅಲ್ಲೂ ಇಂತಹ ಪರಿಸ್ಥಿತಿಯೇ ಏರ್ಪಡುತ್ತದೆ ಎಂಬುದು ಸ್ಪಷ್ಟ, ಅಜ್ಞಾನವನ್ನು ಹಂಚಿಕೊಡರೆ ಕಡಿಮೆಯಾಗುವುದು ಎಂಬ ಮಾತು ಹೇಗೇ ಇದ್ದರೂ, ಅದನ್ನು ಕೂಡಿಟ್ಟುಕೊಳ್ಳುವುದರಿಂದ, ಮುಚ್ಚಿಟ್ಟುಕೊಳ್ಳುವುದರಿಂದಲಂತೂ ಅದು ಹೆಚ್ಚಾಗುತ್ತದೆ ಎಂಬುದು ಖಚಿತ ಹಾಗೆಯೇ ಜ್ಞಾನವನ್ನು ಹಂಚಿಕೊಳ್ಳುವುದರಿಂದ ಹೆಚ್ಚುತ್ತದೆ ಈ ಜ್ಞಾನ ವಿತರಣೆಯ ಒಳರಹಸ್ಯವನ್ನು ತಿಳಿದವರೇ ನಿಜವಾದ ಗುರುಗಳು ಇತರರಿಗೆ ತಮ್ಮಲ್ಲಿನ ಜ್ಞಾನವನ್ನು ದಾನಮಾಡುವುದರಿಂದಲೇ ಅದನ್ನು ಮತ್ತೂ ಆರ್ಜಿಸುವ ಮಂದಿ ಇವರು ಅಥವಾ ಪೂರ್ಣದಿಂದ ಪೂರ್ಣವನ್ನು ತೆಗೆದರೂ ಪೂರ್ಣವೇ ಉಳಿಯುತ್ತದೆ ಎಂಬ ಸೂಕ್ಷ್ಮವನ್ನು ತಿಳಿದವರು

ನನಗೆ ತಿಳಿದಿದೆಯೆಂಬ ಹಮ್ಮಿನಿಂದ ದೂರವಾಗಿ ನಾನೂ ತಿಳಿದುಕೊಳ್ಳುವೆ ಎಂಬ ಭಾವನೆಯಿಂದ ಕಲಸ ಮಾಡುವ ಮಂದಿ ಎಂದರೆ ಹಣ - ಕೀರ್ತಿಗಾಗಿ ಚಿಂತಿಸದೆ ತನಗೆ ಅರ್ಥವಾಗಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ಪ್ರಯತ್ನಿಸುವ ಮಂದಿಯಿಂದಲೇ ಜನತೆ ಏನಾದರೂ ಪಡೆಯಲು ಸಾಧ್ಯ ಹಾಗೆ ನೋಡಹೋದಾಗ ಮತ್ಸ್ಯಗಂಧಿಯ ಮಗನ ಚಿತ್ರ ಮನಃಪಟಲದಲ್ಲಿ ಸುಳಿದರೆ ತೀರ್ಥಸ್ನಾನ ಮಾಡಿದ ಅನುಭವವುಂಟಾಗುತ್ತದೆ ವೇದೋದ್ಧಾರ ಮಾಡಿದ ಮತ್ಸ್ಯಾವತಾರಿಯ ಕೆಲಸವನ್ನು ಮುಂದುವರಿಸಿದವರು ವೇದವ್ಯಾಸರು ಸತ್ಯವನ್ನು ಸುತ್ತಲವರಿಗೆ ಸಾಕ್ಷಾತ್ಕರಿಸಿಕೊಡಲು ಸತ್ಯವತಿಯ ಪುತ್ರ ಪ್ರಯತ್ನಿಸುವುದು ಸಹಜವೇ ಹಾಗಂದೇ ವೇದಗಳನ್ನು ವಿಭಾಗೀಕರಿಸಿ, ಸಂಪಾದಿಸಿ, ವಿಷ್ಣುರೂಪಿಯೆನಿಸಿದರು ಪುರಾಣಗಳನ್ನು ಲಿಖಿಸಿ, ವಿಷ್ಣುತತ್ವ ವಿವರಣೆಯಾದ ಭಾಗವತವನ್ನು ಬರೆದು, ಇತಿಹಾಸವನ್ನು ಬಿಡದೆ ಜಯಕಾವ್ಯವಾಗಿಸಿದರು

ಪ್ರಶ್ನೆ - ಅವರು ಕೊಟ್ಟದ್ದಷ್ಟು ಎಂಬುದಲ್ಲ, ನಾವು ಪಡದದ್ದಷ್ಟು ಎಂಬುದು ಅವರಿಗ ಅದೊಂದು 'ಅವನನ್ನು' ಅರಿಯುವ ಆಟ (ನಮಗೋ ಅವರ ಜೀವನವೇ ಭಗವಂತನ ಬಹಿರ್ಗತ ಓಡಾಟ) ಎಂತಲೇ ಎರಡೂ ಕೈಯೆತ್ತಿ ಧರ್ಮವೆಂದರೇನೆಂದು ಹೇಳುತ್ತಿದ್ದೇನೆ, ಕೇಳುವವರಿಲ್ಲವೇ ಎಂದು ಪ್ರಶ್ನಿಸಿದರು ಅವರಿಂದ ಭುವನವೇ ಉಪಜೀವನ ಪಡೆಯಿತು ಎಂದು ಬಲ್ಲವರು ಹೇಳುತ್ತಾರೆ (ಭುವನೋಪಜೀವಿಗಳಿಬ್ಬರು - ವ್ಯಾಸ - ವಾಲ್ಮೀಕಿ) ಅವರನ್ನು ಆದರ್ಶಗುರುವಿನ ಸ್ಥಾನದಲ್ಲಿಟ್ಟು ನೆನೆಯುವ ದಿನವನ್ನು ಗುರುಪೂರ್ಣಿಮೆಯೆಂದು ಆಚರಿಸುತ್ತ ಬಂದವು. ಅವರ ಹಾದಿಯಲ್ಲಿ ನಡೆಯುವ ಪ್ರಯತ್ನವನ್ನು ಪಡುತ್ತ, ಅವರನ್ನು ನಮಿಸಿ ನಡಯುವುವರಿಂದ ನಾವೂ ತುಸು ಮೇಲೇರಲು ಸಾಧ್ಯವಿದೆ ಎಂಬುದನ್ನು ನೆನೆಯಬೇಕು

**ತುಪ್ಪವಾದಾ ಬಳಿಕ ಹೆಪ್ಪನೆರೆದವರುಂಟೆ**<br>
ನಿಷ್ಪನ್ನವಾದ ಗುರುವಿನುಪದೇಶದಿಂ<br>
ತಪ್ಪದದು ಮುಕ್ತಿ ಸರ್ವಜ್ಞ

# ಮಹರ್ಷಿ ವೇದವ್ಯಾಸರು

- ಎಚ್. ಜೆ. ರಾಮೈಂಗಾರ್.

ವ್ಯಾಸಂ ವಸಿಷ್ಠನಪ್ತಾರಂ
ಶಕ್ತೇಃ ಪೌತ್ರಮಕಲ್ಮಷಂ
ಪರಾಶರಾತ್ಮಜಂ ವಂದೇ
ಶುಕತಾತಂ ತಪೋನಿಧಿಂ
ಅಚತುರ್ವದನೋ ಬ್ರಹ್ಮಾ
ದ್ವಿಬಾಹುರಪರೋಹರಿಃ
ಅಪಾಲಲೋಚನಶ್ಶಂಭುಃ
ಭಗವಾನ್ ಬಾದರಾಯಣಃ

ಕೀಳು ಎನ್ನುವ ಕುಲದಲ್ಲಿ ಜನಿಸಿದ ತಾಯಿ ಸತ್ಯವತಿಯಿಂದ ಜನಿಸಿದರೂ, ಮೇಲು ಎನ್ನುವ ಕುಲದ ತಂದೆ ಪರಾಶರ ಮಹರ್ಷಿಯ ಪ್ರತಿಭೆಯಿಂದ ಇವರು ಬ್ರಹ್ಮರ್ಷಿಯಾದರು ದೀರ್ಘ ಕಾಲ ತಪಸ್ಸುಮಾಡಿ, ಅಪಾರ ಜ್ಞಾನವನ್ನು ಸಂಪಾದಿಸಿ, ನಂತರ ಲೋಕ ಕಲ್ಯಾಣದ ಸಲುವಾಗಿ ಭಾರತೀಯ ಸಾಹಿತ್ಯ ಭಂಡಾರವನ್ನು ತುಂಬಿದರು ವೇದದ ಮಂತ್ರಗಳೆಲ್ಲವನ್ನೂ ಸೇರಿಸಿ, ಅವುಗಳನ್ನು ಋಕ್, ಯಜುರ್, ಸಾಮ, ಅಥರ್ವ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಟ್ಟು ವೇದವ್ಯಾಸ ಎನಿಸಿಕೊಂಡರು

ಬಹಳ ಕಠಿಣವಾದದ್ದು, ಸಾಮಾನ್ಯ ಜನರಿಗೆ ಅರ್ಥವಾಗದಿದ್ದ, ವೇದಮಂತ್ರಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳಲು, ಅನುಕೂಲಿಸುವಂತೆ ಬ್ರಹ್ಮಸೂತ್ರ ಅಥವಾ ವೇದಾಂತಸೂತ್ರಗಳನ್ನು ರಚಿಸಿಕೊಟ್ಟರು ಇದು ಆಚಾರ್ಯತ್ರಯರಿಗೂ ಪ್ರಮಾಣ ಗ್ರಂಥವಾಗಿದ್ದು, ಇದರ ಮೇಲೆ ಮೂವರೂ ಭಾಷ್ಯ ರಚಿಸಿದ್ದಾರೆ

ಅಷ್ಟಾದಶ ಪುರಾಣಗಳನ್ನೂ, ಮಹಾಭಾರತವನ್ನೂ ಕಥಾರೂಪದಲ್ಲಿ ಬರೆದು, ಸಾಮಾನ್ಯ ಜನರಲ್ಲಿ ವೈದಿಕ ಧರ್ಮವು ಪ್ರಚಾರವಾಗಲು ಅಗಾಧ ನೆರವು ನೀಡಿದ್ದಾರೆ ಇದರ ಮೂಲಕ ಜನರಲ್ಲಿ ಹೆಚ್ಚು ತಿಳುವಳಿಗೆ ಬರುವಂತೆ ಮಾಡಿ ಅಮೋಘವಾದ ಉಪಕಾರವೆಸಗಿದ್ದಾರೆ

ವ್ಯಾಸರು ಬರೆದಿರುವ ಮಹಾಭಾರತದ ಭಾಷೆಯು ಗಂಭೀರ, ಸರಳ, ಪ್ರಭಾವಶಾಲಿ ಆಗಿದ್ದು, ಅದು ಹಿಂದೂ ಸಂಸ್ಕೃತಿಯ ವಿಶ್ವಕೋಶವೆನಿಸಿಕೊಂಡಿದೆ ಇದರ ಭಾಗವಾದ ಭಗವದ್ಗೀತೆಯು ಅತ್ಯಂತ ಶ್ರೇಷ್ಠವಾದ ಗೌರವವನ್ನು ಪಡೆದಿರುವ, ಜ್ಞಾನಸಂಗ್ರಹವೆನಿಸಿದ, ಉಪನಿಷತ್ತುಗಳ ಸಾರ ಇದೂ ಆಚಾರ್ಯತ್ರಯರಿಗೆ ಪ್ರಮಾಣ ಗ್ರಂಥವಾಗಿದ್ದು, ಇದರ ಮೇಲೂ ಭಾಷ್ಯ ಬರೆದಿದ್ದಾರೆ ಗೀತೆಯು ಲೋಕಜೀವನದ ವಿಷಯದಲ್ಲಿ ಗೌರವ ಬುದ್ಧಿಯನ್ನೂ, ಕರ್ತವ್ಯಾಚರಣೆಯಲ್ಲಿ ಉತ್ಸಾಹವನ್ನೂ, ಆಪತ್ಕಾಲದಲ್ಲಿ ಧೈರ್ಯವನ್ನೂ, ಸಂಶಯಗ್ರಸ್ತರಾದಾಗ ಮನಸ್ಸಿಗೆ ನೆಮ್ಮದಿಯನ್ನೂ ನೀಡುತ್ತದೆ ಪ್ರಪಂಚದ ನಾನಾ ಭಾಷೆಗಳಲ್ಲಿ ಗೀತೆಯು ಅನುವಾದಿಸಲ್ಪಟ್ಟು ಜನಪ್ರಿಯ ಗ್ರಂಥವಾಗಿದೆ.

ಇಷ್ಟೆಲ್ಲ ಸಾಹಿತ್ಯ ಸೃಷ್ಟಿಮಾಡಿಯೂ ಮನಸ್ಸಿಗೆ ಶಾಂತಿ, ತೃಪ್ತಿ ಸಿಗದಿದ್ದಾಗ, ವ್ಯಾಸರು ನಾರದರ ಸಲಹೆಯಂತೆ ಭಾಗವತದ ಮೂಲಕ ಶ್ರೀಕೃಷ್ಣನ ಚರಿತ್ರೆಯನ್ನು ಬರೆದು, ಅದರಲ್ಲಿ ಹಿಂದೂ ಧರ್ಮದ ಸಾರವನ್ನೆಲ್ಲ ಅಡಗಿಸಿದ್ದಾರೆ

ಮಗನ ಭಾಗವತದ ಆಧ್ಯಾತ್ಮಿಕ ದೃಷ್ಟಿಯೂ ತಂದೆಯ ವಿಷ್ಣುಪುರಾಣದಂತೆಯೇ ಇದೆ



# ಗುರುವಿನ ಮಹತ್ವ

**- ಎಸ್. ಕಲ್ಯಾಣಿ**

ಪರಮಾತ್ಮನನ್ನು ಹುಡುಕುತ್ತಾ ಅಲೆದಾಡುತ್ತಿರುವವನನ್ನು ಅವನ ಬಳಿಗೆ ಕೊಂಡೊಯ್ಯುವ ಸೇತುವೆಯಂತೆ ಇರುವವನೇ ಗುರು ಪರಮಾತ್ಮನ ಪ್ರತ್ಯಕ್ಷ ದರ್ಶನ ಮಾಡಬೇಕೆಂಬ ಹಂಬಲ ಮನಸ್ಸಿನಲ್ಲುಂಟಾದರೆ ಮಾತ್ರವೇ ಗುರುವೆಂಬ ದೈವಿಕಶಕ್ತಿ ಅವನನ್ನು ಹುಡುಕಿಕೊಂಡು ಬರುತ್ತದೆ ಗುರುಶಿಷ್ಯ ಭಾವವೆಂಬುದು ದೈವೀಕವಾದದ್ದು ಸದ್ಗುರುವನ್ನು ಪಡೆಯುತ್ತಿದ್ದಂತೆಯೇ ಅವರ ಮೇಲೆ ಸಂಪೂರ್ಣ ನಂಬಿಕೆಯನ್ನಿಟ್ಟು, ಭಯ - ಭಕ್ತಿಯಿಂದ ಇರುವುದು ಶಿಷ್ಯನಾದವನ ಕರ್ತವ್ಯ

ಗರ್ವ, ಅಹಂಕಾರ, ನಾನತ್ವ ಇವೆಲ್ಲವನ್ನು ದೂರಕ್ಕೆ ಸರಿಸಿ, ಸಕಲ ಸನ್ಮಾರ್ಗಕ್ಕೆ 'ಗುರುವೇ ಜತೆ' ಎಂದು ಅವನನ್ನು ಅನುಸರಿಸಬೇಕು ಶಿಷ್ಯನಾದವನು ಗುರುಗಳಿಗೆ ವಿಧೇಯನಾಗಿರಬೇಕು ನ್ಯಾಯಕ್ಕೆ, ಸತ್ಯಕ್ಕೆ, ಧರ್ಮಕ್ಕೆ ಬಂಧಿತನಾಗಿರಬೇಕು

ಗುರುವಾದವರು ತಾವು ಕಲಿತ ಶಾಸ್ತ್ರದಲ್ಲಿ ಪಾರಂಗತರಾಗಿರುತ್ತಾರೆ ಸದಾ ಹಸನ್ಮುಖಿರಾಗಿರುತ್ತಾರೆ ಪರಿಶುದ್ಧರು, ತಮಗೆ ತಿಳಿದದ್ದನ್ನೆಲ್ಲಾ ಶಿಷ್ಯನಿಗೆ ಧಾರೆ ಎರೆಯುತ್ತಾರೆ ಆಕಸ್ಮಿಕವಾಗಿ ತಿಳಿಯದಿದ್ದಲ್ಲಿ ಒಪ್ಪಿಕೊಳ್ಳುತ್ತಾರೆ

ಶಾಂತಚಿತ್ತರು, ಕ್ರೋಧ, ವಿರೋಧ ಇಲ್ಲದವರು, ಯಾವುದೇ ರೀತಿಯ ಪ್ರಶ್ನೆಗಳು ಎದುರಾದರೂ ಹೆದರದವರು, ಹಿಂಜರಿಯದವರು ಯಾವಾಗಲೂ ದ್ವೇಷವಿಲ್ಲದವರು, ಧಾರಾಳವಾದ ಮನೋಭಾವವುಳ್ಳವರು, ಇತರರಿಗಾಗಿ ಪರಮಾತ್ಮನಲ್ಲಿ ಪ್ರಾರ್ಥನೆ ಮಾಡುವವರು, ಕೊಟ್ಟ ಮಾತಿಗೆ ತಪ್ಪದವರು, ಪಕ್ಷ ಭೇದವಿಲ್ಲದವರು, ಮಂತ್ರಗಳನ್ನೂ, ವಿದ್ಯೆಯನ್ನೋ ಹಣಕ್ಕೆ ಕೊಳ್ಳದವರು, ಸದಾಕಾಲ ವಿದ್ಯಾದಾನಕ್ಕೆ ಹಿಂಜರಿಯದವರು, ಹೊನ್ನಿಗಾಗಲೀ ಮಣ್ಣಿಗಾಗಲೀ ಆಸೆಪಡದವರು, ಶಿಷ್ಯರಿಗುಂಟಾದ ಸಂಶಯಗಳನ್ನು ಸಹನೆಯಿಂದ ಹೋಗಲಾಡಿಸುವವರು ಸ್ವಾರ್ಥತೆ ಇಲ್ಲದವರು ಪರಮಾತ್ಮನಲ್ಲಿ ಶರಣಾಗತರಾದವರು .. ಹೀಗೆ ಇನ್ನೂ ಅನೇಕ ಉನ್ನತ ಗುಣಗಳನ್ನು ಪಡೆದಿರುವವನೇ ಗುರುವೆಂದು ವೇದಗಳಲ್ಲೂ, ಶಾಸ್ತ್ರಗಳಲ್ಲೂ ನಿರ್ಣಯಿಸಲ್ಪಟ್ಟಿದೆ

ಇಡೀ ಪ್ರಪಂಚಕ್ಕೆ ಉನ್ನತವಾದ ವಿದ್ಯೆಗಳನ್ನು ಕಲಿಸಲು ಸಪ್ತ ಋಷಿಗಳು, ಇನ್ನೂ ಹಲವು ಋಷಿಗಳು ಮೇಲೆ ಹೇಳಿದ ಗುಣಭರಿತರಾಗಿದ್ದರು ಆದ್ದರಿಂದಲೇ ಗುರುವನ್ನು ಬ್ರಹ್ಮಾ ವಿಷ್ಣು, ಮಹೇಶ್ವರನೆಂದು ಪೂಜಿಸುವರು ಇಂದು ಶಿಷ್ಯನಾಗಿದ್ದವನು ನಾಳೆ ಗುರುವಾಗಲಿರುವಾತನೇ ಎಂಬ ಅಸ್ತಿಭಾರದಲ್ಲಿ ಪ್ರತಿಯೊಬ್ಬ ಶಿಷ್ಯನೂ ತನ್ನ ಗುರುಕುಲದ ಕಾಲದಲ್ಲಿ ಉನ್ನತ ವಿದ್ಯೆಯಿಂದ, ಉನ್ನತ ಗುಣಗಳನ್ನು, ತನ್ನ ಸ್ವಾಭಾವಿಕ ಲಕ್ಷಣಗಳನ್ನು ಬೆಳೆಸಿಕೊಳ್ಳಬೇಕು ಇದು ಅವನ ಮೊದಲ ಧರ್ಮ ಬ್ರಹ್ಮನಂತೆ ಒಳ್ಳೆಯ ವಿಷಯಗಳನ್ನೆ ಸೃಷ್ಟಿಸಬೇಕು ಅವನ ಮನಸಿನಲ್ಲಿ. ಆ ಮನಸ್ಸಿನಲ್ಲಿ ಉಂಟಾದ ಸದ್ವಿಷಯಗಳನ್ನು ನೆಲೆಯಾಗಿಸಲು ಎದುರಾಗುವ ದುಷ್ಟಶಕ್ತಿಗಳನ್ನು ಈಶ್ವರನಂತೆ ನಿಂತು ಅವುಗಳನ್ನು ಸಂಹಾರಮಾಡಿಕೊಳ್ಳಬೇಕು ನಂತರ ನಿಖರವಾದ ಸದ್ವಿಷಯದ ವಿದ್ಯೆ ಮನಸಿನಲ್ಲಿ ನೆಲೆಸಲು ರಕ್ಷಣೆ, ಆದರೆ ನೀಡುವ ಶ್ರೀವಿಷ್ಣುವಾಗುವುದರಿಂದಲೇ ಗುರುಗಳನ್ನು ತ್ರಿಮೂರ್ತಿಗಳಿಗೆ ಹೋಲಿಸಿ, ಸರಿ ಸಮರೆನ್ನುತ್ತಾರೆ ಗುರುವಿಗೇ ಗುರುವಾಗಿರುವಾತ ಸರ್ವೇಶ್ವರನಾದ ಈಶ್ವರನ ಅಂಶನಾದ ದಕ್ಷಿಣಾಮೂರ್ತಿಯೇ

ವಿದ್ಯೆಗಳಿಗೆಲ್ಲಾ ಮೂಲಾಧಾರವಾಗಿರುವಾಕೆ ಶ್ರೀವಿದ್ಯ, ಸದ್ಗುರುಗಳ ಮುಖಾಂತರ ಶ್ರೀವಿದ್ಯೆ ಕಲಿತು ಕ್ರಮವಾಗಿ ಅನುಷ್ಠಾನಕ್ಕೆ ತರುವವರೇ ಮಾನವರಲ್ಲಿ ದೈವರಾಗಿ ಗೌರವಿಸಲ್ಪಡುತ್ತಾರೆ

* * *

"ಈ ವಿಶ್ವ ವ್ಯವಸ್ಥೆಯಲ್ಲಿ ವ್ಯಕ್ತವಾಗುವ ಓರಣೆ, ಹೊಂದಿಕೆ ಹಾಗೂ ವೈವಿಧ್ಯಗಳಲ್ಲಿ ಭಗವಂತನ ಅಚಿಂತ್ಯಾದ್ಭುತವಾದ ಜ್ಞಾನಕ್ರಿಯಾದಿ ಶಕ್ತಿಗಳು ಎಲ್ಲರಿಗೂ ತೋರುತ್ತವೆ ಆತನ ಪ್ರೇಮ, ಕಾರುಣ್ಯ, ಸೌಂದರ್ಯ, ಮಾಧುರ್ಯ ಮುಂತಾದ ಶ್ರೇಷ್ಠತಮ ಕಲ್ಯಾಣ ಗುಣಗಳು, ಆತನಿಂದಲೇ ಸೃಷ್ಟಿಸಲ್ಪಟ್ಟಿರುವ ಜೀವಾತ್ಮರುಗಳಲ್ಲಿ ದೊರಕುವುದು ಅತ್ಯಂತ ಶ್ರೇಷ್ಠ ಭಕ್ತರಿಗೆ ಮಾತ್ರ.

"ಈ ಸಮಸ್ತ ವಿಶ್ವವೂ ಸತ್ಯಜ್ಞಾನ, ಶಿವ ಸುಂದರ, ಸ್ವತಂತ್ರ, ಆದ ಪರಮಾತ್ಮನ ಅಪ್ರೇರಿತ, ಲೀಲಾತ್ಮಕ ಸ್ವಾಭಿವ್ಯಂಜನೆಯೇ ಆಗಿದೆ ಮಾನವ ಸಮಾಜದಲ್ಲಿ ಕಾಣಬರುವ ಅಜ್ಞಾನ, ಅಸಮಗ್ರಜ್ಞಾನ, ದುಷ್ಟವೆನಿಸುವ ಪ್ರವೃತ್ತಿಗಳು, ದ್ವೇಷ, ಸ್ಪರ್ಧೆ, ಹೋರಾಟ - ಇವೆಲ್ಲವೂ ಪರಮಾತ್ಮನ ಲೀಲೆಯ ಅಭಿವ್ಯಂಜನೆಗಳು ಆದುದರಿಂದ ಈ ವಾಸ್ತವ ಸ್ಥಿತಿಯನ್ನು ಕುರಿತು ಜುಗುಪ್ಸೆ ಪಡಬಾರದು, ಅದರಿಂದ ತಪ್ಪಿಸಿಕೊಂಡು ಹಾರಿಹೋಗಲು ಬಯಸಬಾರದು ಪರಮಾತ್ಮನ ಅಖಂಡ ಸ್ವರೂಪದಲ್ಲಿ ತನ್ನನ್ನು ಲೀನವನ್ನಾಗಿ ಮಾಡುವ ಮುಕ್ತಿಗೂ ಕಾತರಿಸಬಾರದು

"ಪ್ರಪಂಚದಲ್ಲಿ ಅಂದರೆ ತನ್ನಲ್ಲಿ, ಲೋಕದ ಸ್ತ್ರೀ ಪುರುಷರಲ್ಲಿ, ಜೀವಿ - ವಸ್ತುಗಳಲ್ಲಿ, ಶಕ್ತಿಗಳಲ್ಲಿ ಎಲ್ಲೆಲ್ಲೂ ಪರಮಾತ್ಮನು ಇರುವುದರಿಂದ ಅವನ ಈ ಲೀಲಾಚೇಷ್ಟಿತಗಳನ್ನು ಪ್ರೇಮಭಾವದಿಂದ ಕಂಡು ಆಲಂಗಿಸಿಕೊಂಡು, ಅಸಹ್ಯವಾದುದನ್ನು ಕಂಡು ದೂರ ಹೋಗದೆ ಸೇವೆ ಮಾಡಬೇಕು ಹೀಗೆ ವಿವಿಧ ಪ್ರಕಾರದ ಜೀವಿಗಳೆಲ್ಲ ಪರಮ ಪುರುಷನಾದ ನಾರಾಯಣನ ಅವತಾರಗಳಾದ ಕಾರಣ ಸೃಷ್ಟಿಯ ಎಲ್ಲ ಪ್ರಕಾರಗಳಲ್ಲೂ ಅವನ ಇರುವಿಕೆಯನ್ನು ಕಂಡು ಗೌರವಿಸಬೇಕು

"ಅವತಾರಗಳಲ್ಲೆಲ್ಲ ಪೂರ್ಣ, ಶ್ರೇಷ್ಠತಮ, ಪರಬ್ರಹ್ಮಸ್ವರೂಪ ಆದುದು ಶ್ರೀಕೃಷ್ಣ ಆ ಭಗವಂತನೊಡನೆ ಪರಮೈಕಾಂತ ಭಕ್ತಿಯೇ ಮನುಷ್ಯ ಜೀವಿತದ ಪರಮ ಪುರುಷಾರ್ಥ ಶರೀರದ ಸರ್ವಾಂಗಗಳೂ, ಸರ್ವೇಂದ್ರಿಯಗಳೂ, ಈ ದೈವೀ ಪ್ರಣಯದಿಂದ ಸೇಚನಗೊಂಡು, ಆತನ ಸೌಂದರ್ಯ ಮತ್ತು ಆನಂದಾನುಭೂತಿಗಳಿಂದ ಜೀವವು ತುಂಬಿ ತುಳುಕಾಡಬೇಕು" ಇದು ಭಾಗವತದ ಸಾರ

ಇವೆಲ್ಲದರ ಫಲವಾಗಿ ವ್ಯಾಸರು ಭಗವಾನ್ ಬಾದರಾಯಣ ಎನಿಸಿಕೊಂಡುದಲ್ಲದೆ, "ವ್ಯಾಸಾಯ ವಿಷ್ಣುರೂಪಾಯ, ವ್ಯಾಸರೂಪಾಯ ವಿಷ್ಣವೇ" ಎಂದು ಹೊಗಳಿಸಿಕೊಂಡರು ಇವರ ಶಿಷ್ಯರಾದ ಬೋಧಾಯನ ಋಷಿಗಳೇ ವಿಶಿಷ್ಟಾದ್ವೈತದ ಮೊದಲ ಪ್ರತಿಪಾದಕರು

(- ಶ್ರೀ ರಾಮಾನುಜ ಸಿದ್ಧಾಂತ ದರ್ಪಣದಿಂದ)

* * *

# ಭಾರತೀಯ ಶಿಕ್ಷಣ

- ಡಾ|| ಎಂ. ಕೆ. ಭಾರತೀರಮಣಾಚಾರ್ಯ.

ಭಾರತದಲ್ಲಿ ಶಿಕ್ಷಣ ಪದ್ಧತಿಯೊಂದಿದೆ ಆದರೆ ಆ ಪದ್ಧತಿಯಲ್ಲಿ ಭಾರತೀಯತೆ ಇಲ್ಲ ಸಮವಸ್ತ್ರಧಾರಿಗಳಾಗಿ ಪುಸ್ತಕದ ಹೊರೆ ಹೊತ್ತು ಅದನ್ನು ಮಸ್ತಕದಲ್ಲಿ ಪರೀಕ್ಷೆ ಮುಗಿಯುವವರೆಗೂ ತುರುಕಿಕೊಂಡಿದ್ದು ನಂತರ ಪುಸ್ತಕದ ಹೊರೆ ಇಳಿಸಿ, ಮಸ್ತಕವನ್ನು ಖಾಲಿ ಮಾಡಿಕೊಂಡು, ಹೇಗೋ ಒಂದು ನೌಕರಿಯನ್ನು ಗಿಟ್ಟಿಸಿಕೊಂಡು ಸುಖಮಯ ಜೀವನವನ್ನು ನಡೆಸಲು ಹಾತೊರೆಯುವ ವ್ಯಕ್ತಿಗಳ ನಿರ್ಮಾಣ ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ ಎದ್ದು ಕಾಣುವ ಅಂಶ ಈ ಪದ್ಧತಿಯಲ್ಲಿ ಸುಶಿಕ್ಷಿತನೆನ್ನಿಸಿಕೊಂಡವನಲ್ಲಿ ಸಾಮಾಜಿಕ ಕಳಕಳಿಯ ಬದಲು ಸ್ವಾರ್ಥ ದೃಷ್ಟಿ ಪ್ರಬಲವಾಗಿರುತ್ತದೆ ಸುಖಜೀವನದ ಹಂಬಲ ಎದ್ದು ಕಾಣುತ್ತದೆ ಭೋಗ ಭಾಗ್ಯಗಳ ಸಂಗ್ರಹವೇ ಪರಮ ಪುರುಷಾರ್ಥವೆಂಬ ಲಕ್ಷ್ಯ ಬೇರು ಬಿಟ್ಟಿರುತ್ತದೆ ಸ್ವಪ್ರತಿಷ್ಠೆಗೆ ಮಹತ್ವ, ಅದಕ್ಕೆ ಪೋಷಕವಲ್ಲದ, ತನ್ನ ಕುಟುಂಬ, ಪರಿವಾರ, ಸಮಾಜ, ಹೆಚ್ಚೇಕೆ ರಾಷ್ಟ್ರವೂ ಕೂಡ ತಿರಸ್ಕಾರಾರ್ಹ ಎನ್ನುವ ಧೋರಣೆ ಎದ್ದು ಕಾಣುತ್ತದೆ ಇಂಥ ವ್ಯಕ್ತಿಗಳಿಂದಲೇ ಇಂದು ಭಾರತ ಅಧೋಗತಿಗಿಳಿದಿರುವುದು ಬಡತನದ ಬವಣೆಗೀಡಾಗಿರುವುದು ಅಶಾಂತಮಯವಾಗಿರುವುದು ಹಿಂದೆ ಜಗದ್ಗುರುವಾಗಿ ಮೆರೆದ ಭಾರತ, ಇಂದಿಗೂ ಆ ಸತ್ವ ಹೊಂದಿರುವ ಭಾರತ, ಪ್ರಚಲಿತ ಶಿಕ್ಷಣ ಪದ್ಧತಿಯ ಪರಿಣಾಮವಾಗಿ ವ್ಯಕ್ತಿಯಂತೆ ರಾಷ್ಟ್ರವೂ ಸಹ ಕೀಳರಿಮೆಯನ್ನು ಮೈಗೂಡಿಸಿಕೊಂಡು, ತನ್ನ ಭವ್ಯ ಸಂಸ್ಕೃತಿ ಮತ್ತು ಇತಿಹಾಸವನ್ನು ತಿರಸ್ಕರಿಸಿ, ತನ್ನ ದೂಷಿತ ದೃಷ್ಟಿಯಿಂದಾಗಿ ಅವುಗಳಲ್ಲಿ ದೋಷವೆಂದು ತೋರುವ ಅಂಶಗಳನ್ನೇ ವಿಚಾರಶೂನ್ಯವಾಗಿ ಎತ್ತಿ ಆಡುತ್ತಾ, ಪಾಶ್ಚಾತ್ಯರ ಅಂಧಾನುಕರಣೆ ಮಾಡುತ್ತ, ಜನ ಜೀವನವನ್ನು ಅರಿವಿಲ್ಲದೇ ಪಾಶ್ಚಾತ್ಯ ಸಂಸ್ಕೃತಿಯ ಮೂಸೆಯಲ್ಲಿ ಎರಕ ಹೊಯ್ಯಲು ಯತ್ನಿಸುತ್ತಾ ಭಾರತವ ಸರ್ವತೋಮುಖ ಅಧೋಗತಿಗೆ ಕಾರಣವಾಗಿರುವುದು

ಹಿಂದೆ ಭಾರತ ವೈಭವದ ಶಿಖರವನ್ನೇರಿ ಜಗದ್ಗುರುವೆನ್ನಿಸಿಕೊಂಡು ಬಾಳಲು ಕಾರಣವಾದದ್ದು ಅಂದಿನ ಶಿಕ್ಷಣ ಪದ್ಧತಿ ಅಂದಿನ ಶಿಕ್ಷಣವನ್ನು ಮೂರು ಹಂತವಾಗಿ ನಿರೂಪಿಸಲಾಗಿತ್ತು ಮೊದಲ ಹಂತದ ಶಿಕ್ಷಣವನ್ನು ಅದಿಶೀಲ ಶಿಕ್ಷಣವೆಂದು ಕರೆಯುತ್ತಿದ್ದರು ಈ ಶಿಕ್ಷಣವನ್ನು ನೀಡುವ ಹೊಣೆಗಾರಿಕೆ ತಾಯಿ, ತಂದೆ, ಮನೆಯ ಹಿರಿಯರು ಮತ್ತು ಸಮಾಜ ಬಾಂಧವರದ್ದಾಗಿರುತ್ತಿತ್ತು ಪ್ರತಿಯೊಂದು ಮಗುವಿಗೂ ಈ ಶಿಕ್ಷಣ ದೊರೆಯುತ್ತಿತ್ತು ಈ ಹಂತದಲ್ಲಿ ಮುಖ್ಯವಾಗಿ ತನ್ನ ಪರಿಸರಕ್ಕೆ ಹೊಂದಿಕೊಂಡು ಬಾಳುವುದನ್ನು ಕಲಿಸಲಾಗುತ್ತಿತ್ತು ಗುರುಹಿರಿಯರಲ್ಲಿ ಶ್ರದ್ಧೆ, ದೇವರಲ್ಲಿ ಭಕ್ತಿ, ಸಮಾನಸ್ಕಂಧರಲ್ಲಿ ಸ್ನೇಹ, ಕಿರಿಯರಲ್ಲಿ ಹಾಗೂ ಅಸಹಾಯಕ ಸ್ಥಿತಿಯಲ್ಲಿರುವವರಲ್ಲಿ ದಯೆ, ಕಾರುಣ್ಯ ದೃಷ್ಟಿಯನ್ನು ಬೆಳೆಸಲಾಗುತ್ತಿತ್ತು ನಡೆನುಡಿಯಲ್ಲಿ ಪರರಿಗೆ ನೋವುಂಟಾಗದಂತೆ ವರ್ತಿಸುವ ಅಭ್ಯಾಸವನ್ನು ಮಾಡಿಸಲಾಗುತ್ತಿತ್ತು ಈ ಶಿಕ್ಷಣ ಮಗು ಎಂಟು ಹತ್ತು ವರ್ಷಗಳಾಗುವಷ್ಟರಲ್ಲಿ ಪಡೆದಿರಬೇಕಿತ್ತು

ಎರಡನೇ ಹಂತವನ್ನು ಅದಿಚಿತ್ತ ಶಿಕ್ಷಣ ಎಂದು ಗುರುತಿಸಲಾಗಿತ್ತು ಇದರ ಮುಖ್ಯ ಗುರಿ ಶೀಲಸಂವರ್ಧನ, ಸಹಜವಾಗಿ ಮಾನವನೊಂದಿಗೇ ಬೆಳೆದು ಬರುವ ಕಾಮ, ಕ್ರೋಧ, ಲೋಭ, ಮದ, ಮಾತ್ಸರ್ಯಾದಿ ಭಾವಗಳು, ಸಮಾಜಘಾತುಕ ಶಕ್ತಿಗಳಾಗಿ ಬೆಳೆಯದಂತೆ ನಿಯಂತ್ರಿಸಿ, ಅವುಗಳು ವ್ಯಕ್ತಿತ್ವದ ವಿಕಾಸಕ್ಕೂ ಸಮಾಜದ ಕಲ್ಯಾಣಕ್ಕೂ ಉಪಯುಕ್ತವಾಗುವಂತೆ ಉದಾತ್ತೀಕರಿಸುವ ಸಂಸ್ಕಾರವನ್ನು ನೀಡಲಾಗುತ್ತಿತ್ತು ಇದು ಗುರುಕುಲದಲ್ಲಿ ಮಾತ್ರ ದೊರೆಯಲು ಸಾಧ್ಯವಿತ್ತು ಗುರುವು ತನ್ನ ಆದರ್ಶಮಯ ಸರಳ ಜೀವನ ಹಾಗೂ ಉದಾತ್ತ ಚಿಂತನೆಯಿಂದಲೇ ತನ್ನ ಅಂತೇವಾಸಿಗಳ ಜೀವನವನ್ನು ರೂಢಿಸುತ್ತಿದ್ದ ಅವನು ಶಾಸ್ತ್ರಾದಿಗಳ ಅಧ್ಯಯನದಿಂದ ಸಮೀಚೀನ ಆಚಾರ ಸಂಹಿತೆಯನ್ನು ರೂಢಿಸಿಕೊಂಡು, ಸ್ವತಃ ಅನುಷ್ಠಾನದಲ್ಲಿಟ್ಟುಕೊಂಡು, ಅನ್ಯರಿಗೆ ಬೋಧಿಸುತ್ತಾ ಆ ಆಚರಣೆಯು ಆದೇಶ, ಉಪದೇಶ ಕ್ರಮಗಳಿಂದ ಅನುಶಾಸನವಾಗಿ ಮಾರ್ಪಡುವಂತೆ ಎಚ್ಚರ ವಹಿಸಿ ಇತರರಿಂದಲೂ ಅನುಷ್ಠಾನ ಮಾಡಿಸುವಲ್ಲಿ ಸಮರ್ಥನಾಗಿರುತ್ತಿದ್ದ ಆಚಾರ್ಯ ಪದವಿಗೆ ಅರ್ಹನಾಗಿರುತ್ತಿದ್ದ ತನ್ನ ಶಿಷ್ಯರ ಅಜ್ಞಾನವನ್ನು ದಹಿಸಿ,



ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

## 'ಸುದರ್ಶನ' ದಮೂಲಕ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಿರಿ.

* ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಭಕ್ತರು ಗಂಟೆಗಟ್ಟಲೆ ಕ್ಯೂಕಂಪಾರ್ಟ್‌ಮೆಂಟ್‌ಗಳಲ್ಲಿ ಕಾಯುವ ಪರಿಸ್ಥಿತಿಯನ್ನು ತಪ್ಪಿಸಲು 'ಸುದರ್ಶನ' ಟೋಕನ್ ಪದ್ಧತಿಯನ್ನು ಪ್ರವೇಶಗೊಳಿಸಲಾಗಿದೆ
* ಈ ಟೋಕನ್‌ಗಳನ್ನು ತಿರುಪತಿಯ ರೈಲ್ವೆ ನಿಲ್ದಾಣದ ಹಿಂದಿರುವ ಎರಡನೆ ಸತ್ರದ ಬಳಿ ಹಾಗೂ ತಿರುಮಲೆಯ - ವೈಕುಂಠಂ ಕ್ಯೂ ಕಾಂಪ್ಲೆಕ್ಸ್, ಪಿ ಪಿ ಸಿ ಷೆಡ್‌ಗಳ ಬಳಿ ಒಬ್ಬ ವ್ಯಕ್ತಿಗೆ ಒಂದರಂತೆ ಉಚಿತವಾಗಿ ನೀಡಲಾಗುವುದು
* ತಿರುಪತಿಯನ್ನು ಸೇರಿದ ಕೂಡಲೇ ತಾವು ಈ ಟೋಕನ್‌ಗಳನ್ನು ಪಡೆದಲ್ಲಿ, ತಮಗೆ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನವಾಗುವ ಸಮಯವನ್ನು ಈ ಟೋಕನ್ ಮೂಲಕ ತಿಳಿಯಬಹುದು
* ಈ ಟೋಕನ್‌ಗಳಲ್ಲಿ ಸೂಚಿಸಿರುವ ಸಮಯಕ್ಕೆ ತಾವು ತಿರುಮಲೆಯ ಕ್ಯೂ ಕಾಂಪ್ಲೆಕ್ಸ್‌ಗೆ ಬಂದರೆ, ಈ ಟೋಕನ್‌ಗಳನ್ನು ಪರಿಶೀಲಿಸಿ, ಐದು ರೂಪಾಯಿನ ಲಾಡು ಟೋಕನ್ ಅನ್ನು ನೀಡಿ, ದರ್ಶನದ ಸಾಲಿನಲ್ಲಿ ತಮ್ಮನ್ನು ಸೇರಿಸಲಾಗುತ್ತದೆ
* ಸರತಿಯ ಸಾಲಿನಲ್ಲಿ ತಾವು ಸೇರಿದನಂತರ ಎರಡು ಗಂಟೆಗಳಲ್ಲಿ ತಮಗೆ ಸ್ವಾಮಿಯ ದರ್ಶನ ಸಾಧ್ಯವಾಗುತ್ತದೆ
* ತಾವು 'ಸುದರ್ಶನ' ಕಂಕಣವನ್ನು ಧರಿಸಿ ಸ್ನಾನ ಮೊದಲಾದ ನಿತ್ಯಕೃತ್ಯಗಳನ್ನು ನಡೆಸಿಕೊಳ್ಳಬಹುದು
* ಈ ಪದ್ಧತಿಯ ಮೂಲಕ ತಮಗೆ ದೊರಕಿದ ಬಿಡುವಿನ ಹೊತ್ತಿನಲ್ಲಿ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ, ಕಪಿಲತೀರ್ಥ, ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯಗಳನ್ನು ನೋಡಬಹುದು ಇದಕ್ಕಾಗಿ ಪ್ರತ್ಯೇಕವಾದ ಬಸ್‌ಗಳಿವೆ

### ಎಚ್ಚರಿಕೆ :

1 'ಸುದರ್ಶನ' ಟೋಕನ್‌ಗಳನ್ನು ತಿರುಮಲೆ ತಿರುಪತಿ ದೇವಸ್ಥಾನದವರ ಕೌಂಟರಿನಲ್ಲಿಯೇ ಪಡೆಯಬೇಕು ಹೊರಗಡೆಯವು ಚಲಾವಣೆಯಾಗದು
2 ದರ್ಶನವಾಗುವವರೆಗೆ ಕೈಗೆ ಕಟ್ಟಿದ ಕಂಕಣವನ್ನು ತೆಗೆಯಬಾರದು
3 ಟೋಕನ್‌ಗಳನ್ನು ಇತರರಿಗೆ ನೀಡಬಾರದು
4 ವಂಚಕರ ಮಾತಿಗೆ ಮರುಳಾಗದಿರಿ
5 ಹತ್ತಿರದ ತಿ ತಿ ದೇವಸ್ಥಾನಗಳ ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ

ಸುದರ್ಶನದ ಮೂಲಕ ಸುಖಪ್ರದ ಸುಲಭತರ ದರ್ಶನ ಪಡೆಯಿರಿ
ತಮ್ಮ ಬಿಡುವಿನ ವೇಳೆಯನ್ನು ಸ್ಥಳೀಯ ಆಲಯಗಳ ದರ್ಶನದಲ್ಲಿ ಸಾರ್ಥಕ ಪಡಿಸಿಕೊಳ್ಳಿರಿ.

ಕಾರ್ಯನಿರ್ವಹಣಾಧಿಕಾರಿ,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ

ಅವನಲ್ಲಿರುವ ಶ್ರದ್ಧೆಗನುಗುಣವಾಗಿ ಜ್ಞಾನಜ್ಯೋತಿಯು ಪ್ರಜ್ವಲಿಸುವಂತೆ ಮಾಡಿ, ಸರ್ವರ ಸುಖದಲ್ಲಿ ಆತ್ಮಸುಖವನ್ನು ಕಾಣುವ ಉದಾತ್ತ ಚರಿತರನ್ನು ನಿರ್ಮಿಸುತ್ತಿದ್ದ ಅಂದು ಇಷ್ಟೆಲ್ಲ ಮಾಡಲು ಸಮರ್ಥನಾದ ಆಚಾರ್ಯ ಅಥವಾ ಗುರು ತನ್ನ ಶಿಷ್ಯರಿಂದ ಬಯಸುತ್ತಿದ್ದುದು ಪರಾಜಯವನ್ನು ಅಂದರೆ ತನ್ನ ಶಿಷ್ಯ ತನಗಿಂತಲೂ ವಿದ್ಯೆ ವಿನಯಾದಿ ಸದ್ಗುಣಗಳಲ್ಲಿ ಮೀರಿದವನೂ, ಸದನುಷ್ಠಾನ ಸಂಪನ್ನನೂ, ಸಮಾಜಕ್ಕೊಂದು ಅವಿಸ್ಮರಣೀಯ ಆದರ್ಶ ಸಂಪನ್ನ ವ್ಯಕ್ತಿಯಾಗಿ ದೆಳೆದು ಮೆರೆಯದೇಕು ಎಂದು ಬಯಸುತ್ತಿದ್ದ ತಪಃಸ್ವಾಧ್ಯಾಯವೇ ಆ ಗುರುವಿನ ಸಾಧನಾಪಥವಾಗಿರುತ್ತಿತ್ತು ತನ್ನ ಶಿಷ್ಯನೂ ಸಹ ಈ ಬಗೆಯ ಪ್ರಜಾತಂತ್ರವು ಖಂಡಿತವಾಗದೆ ದೆಳೆಯುವಂತೆ ಎಚ್ಚರ ವಹಿಸುವವನಾಗದೇಕೆಂದು ನಿರೀಕ್ಷಿಸುತ್ತಿದ್ದ

ಇಂದು ಭಾರತದ ಸರ್ವತೋಮುಖ ಅಧೋಗತಿಗೆ ಕಾರಣವಾಗಿರುವ ನಿಯಂತ್ರಿತ ಶಾಲೆಗಳಲ್ಲಿ ಗುರುಸ್ಥಾನೀಯರಾಗಿರುವವರಲ್ಲಿ ಬಹುತೇಕ ಮಂದಿ ತಟಸ್ಥರು ಅಂದರೆ ಅದು ತಾವೇನು ಮಾಡಬೇಕೆಂಬುದರ ಅರಿವೇ ಇಲ್ಲದವರು ಪುಸ್ತಕದಲ್ಲಿದ್ದುದನ್ನು ಮಕ್ಕಳಿಗೆ ಉರುಹೊಡಿಸಿ ಮಸ್ತಕಕ್ಕೆ ತುರುಕಿದರೆ ತಮ್ಮ ಕೆಲಸವಾಯಿತೆಂದು ತಿಳಿದಿರುವವರು

ಕೆಲವು ಶಿಕ್ಷಕರು ತತ್ಪರರಾಗಿರುವುದೂ ಕಂಡು ಬರುತ್ತದೆ ಇವರು ಮಕ್ಕಳು ಪರೀಕ್ಷೆಗಳಲ್ಲಿ ಹೆಚ್ಚು ಹೆಚ್ಚು ಅಂಕಗಳನ್ನು ಗಳಿಸಬಲ್ಲ ಕೌಶಲವನ್ನು ಕಲಿಸಿಕೊಡುವಲ್ಲಿ ಸಮರ್ಥರಿರುತ್ತಾರೆ ಪುಸ್ತಕದ ಮಾಹಿತಿಯನ್ನು ಪರೀಕ್ಷಾ ದೃಷ್ಟಿಯಿಂದ ಕಲಿಸುವುದೊಂದೇ ತಮ್ಮ ಕರ್ತವ್ಯವೆಂದು ಭಾವಿಸಿರುವವರು ಈ ದೃಷ್ಟಿಯಿಂದ ಇವರು ಸ್ಕೂಲಿನಲ್ಲಿ ಕಲಿಸುವುದಕ್ಕಿಂತಲೂ ಹೆಚ್ಚಾಗಿ ಮನೆಯ ಪಾಠಕ್ಕೆ ಬಂದವರಲ್ಲಿ ಹೆಚ್ಚು ಕಾಳಜಿ ವಹಿಸಿ, ಅವರು ತೇರ್ಗಡೆ ಹೊಂದುವಂತೆ ಮಾಡುವಲ್ಲಿ ದಕ್ಷರು ಈ ತತ್ಪರರು ತಮ್ಮ ದಕ್ಷತೆಯನ್ನು ದ್ರವ್ಯಾರ್ಜನೆಯ ಸಾಧನವಾಗಿ ಬಳಸಿಕೊಳ್ಳುವ ನಿಪುಣರು

ಶಿಷ್ಯನಲ್ಲಿರುವ ಸಾಮರ್ಥ್ಯವನ್ನು ಸಂವರ್ಧಿಸಿ, ಅವನನ್ನು ಸಮಾಜೋಪಯೋಗೀ ವ್ಯಕ್ತಿಯನ್ನಾಗಿ ಮಾಡದೇಕೆಂಬ ಕಳಕಳಿ ಹೊಂದಿರುವ ಶಿಕ್ಷಕರನ್ನು ತಲ್ಲೀನರೆಂದು ಗುರುತಿಸಬಹುದು ಇಂಥವ ಸಂಖ್ಯೆ ಕಡಮೆ ಇವರು ವೃತ್ತಿಗಾಗಿ

ಶಿಕ್ಷಕರಾದವರಲ್ಲ ಇವರ ಪ್ರವೃತ್ತಿಯೇ ಶಿಕ್ಷಣಕ್ಕೆ ಪೋಷಕವಾದುದು ಇವರು ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಶಿಷ್ಯರೊಂದಿಗಿರುವ ಪರಿಮಿತ ಕಾಲದೊಳಗಾಗಿ ತಮ್ಮ ವ್ಯಕ್ತಿತ್ವದ ಪ್ರಭಾವವನ್ನು ತಮ್ಮ ಶಿಷ್ಯರ ಮೇಲೆ ಬೀರಿ, ಅವರ ಜೀವನದಲ್ಲಿ ಸತ್ಪ್ರೇರಣೆಯನ್ನು ನೀಡಿ, ಸನ್ಮಾರ್ಗಾನುಯಾಯಿಗಳಾಗುವಂತೆ ಮಾಡುವಲ್ಲಿ ಸಾಕಷ್ಟು ಯಶಸ್ವಿಗಳಾಗಿರುತ್ತಾರೆ ಆದರು ಇಂದಿನ ಶಿಕ್ಷಣ ಪದ್ಧತಿಯಲ್ಲಿ ಈ ತಲ್ಲೀನರು ಹೆಚ್ಚಿನದನ್ನು ಸಾಧಿಸಲು ಸಾಧ್ಯವಿಲ್ಲ

ಅದೇ ಇಂಥ ತಲ್ಲೀನರು ಗುರುಕುಲ ಪದ್ಧತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಸುಸಂದರ್ಭವನ್ನು ಪಡೆಯಲು ಸಾಧ್ಯವಿದ್ದರೆ ತನ್ಮಯರಾಗಿ ದೆಳೆದು, ವಿದ್ಯಾರ್ಥಿಯ ಸರ್ವಾಂಗೀಣ ವಿಕಾಸದಲ್ಲಿ ಯಶಸ್ವಿಯಾಗಬಲ್ಲರು

ಇಂಥ ತನ್ಮಯ ಗುರುವೃಂದದಿಂದ ಕೂಡಿದ ಗುರುಕುಲ ಶಿಕ್ಷಣ ಪದ್ಧತಿಯನ್ನು ರೂಢಿಗೆ ತರದೇಕಾಗಿರುವುದು ಇಂದಿನ ಪ್ರಸ್ತುತಿ ಈ ಪದ್ಧತಿಯಲ್ಲಿ ಪಠ್ಯಪುಸ್ತಕಗಳ ಹೊರೆ ಇರದೇಕಾಗಿಲ್ಲ ಪರೀಕ್ಷಾಪದ್ಧತಿಯ ಅಗತ್ಯವಿಲ್ಲ ಗುರುವೇ ಶಿಷ್ಯನ ಯೋಗ್ಯತೆಯನ್ನರಿತು, ಅವನಲ್ಲಿರುವ ಸಾಮರ್ಥ್ಯವನ್ನು ದೆಳೆಸಿ, ಅವನನ್ನು ಸಮಾಜೋಪಯೋಗೀ, ಕರ್ತವ್ಯನಿಷ್ಠ ಸ್ವಾವಲಂಬೀ ನಾಗರಿಕನನ್ನಾಗಿ ರೂಪಿಸುವಲ್ಲಿ ಸ್ವಾತಂತ್ರ್ಯ ಸಂಪನ್ನನಾಗಿರುತ್ತಾನೆ ತನ್ಮಯತೆಯನ್ನು ಪಡೆದ ಆಚಾರ್ಯನು, ಅಧೀತಿ (ಮಾಹಿತಿ ಸಂಗ್ರಹ)ಯ ಹರವನ್ನು ತಿಳಿಸಿಕೊಟ್ಟು, ಅದನ್ನು ದೋಧವಾಗಿ ಮಾರ್ಪಡಿಸಿಕೊಳ್ಳುವ ಕೌಶಲವನ್ನು ಕಲಿಸಿಕೊಟ್ಟು ಆಚರಣೆಯಲ್ಲಿ ಅದು ಪ್ರಸ್ಫುಟಿತವಾಗುವಂತೆ ಮಾಡುವಲ್ಲಿ ಸಮರ್ಥನಾಗುತ್ತಾನೆ ಈ ಪದ್ಧತಿಯಲ್ಲಿ ಪರೀಕ್ಷೆಯ ಅಗತ್ಯವಿಲ್ಲ ಶಿಷ್ಯನು ಮಾಡುವ ಕಾರ್ಯದಿಂದಲೇ ಅವನ ಕಲಿಕೆಯ ಮಟ್ಟದ ಅರಿವು ಸಹಜವಾಗಿ ಆಗುತ್ತದೆ

ನೂರಕ್ಕೆ ತೊಂಬತ್ತು ಭಾಗ ಶಿಕ್ಷಣ ಈ ಹಂತದಲ್ಲಿ ಪೂರೈಸುತ್ತದೆ ಗುರುಕುಲದಿಂದ ಹೊರಟ ವಿದ್ಯಾರ್ಥಿ, ಅಲ್ಲಿರುವಾಗಲೋ ಅಥವಾ ಅಲ್ಲಿಂದ ಹೊರಟು ಮನೆ ಸೇರುವ ಮುನ್ನವೋ ತನ್ನ ವೃತ್ತಿಗಾಗಿ ಯಾವುದಾದರೂ ಒಂದು ಕಸುಬನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದ ಅದರಲ್ಲಿ ಪರಿಣತಿಯನ್ನು ಪಡೆಯುತ್ತಿದ್ದ

ಇನ್ನು ಅಧಿಪ್ರಜ್ಞಾ ಹಂತದ ಶಿಕ್ಷಣವು ಆಯ್ಕೆಯಾದ ಕೆಲವೇ ಮಂದಿಗೆ ಮೀಸಲಿರುತ್ತಿತ್ತು ಯಾರು ತಮ್ಮ ಜೀವನವನ್ನು ಕೇವಲ ವಿದ್ಯಾರ್ಜನೆಗಾಗಿ ಸಮರ್ಪಿಸಿಕೊಳ್ಳಲು ಸಿದ್ಧರಿದ್ದರೋ ಅಂಥವರಿಗೆ ಮಾತ್ರ ವಿವಿಧ ಕ್ಷೇತ್ರಗಳಲ್ಲಿ ಈ ಶಿಕ್ಷಣವನ್ನು ಪಡೆಯುವ ಅವಕಾಶವಿರುತ್ತಿತ್ತು ಅಂಥವರು ತಮ್ಮ ವಿದ್ಯೆಯನ್ನು ಜೀವಿಕೋಪಾರ್ಜನೆಯ ಸಾಧನವಾಗಿ ಬಳಸಿಕೊಳ್ಳುವುದಿಲ್ಲ ಮತ್ತು ಅದನ್ನು ಸಮಾಜದಲ್ಲಿ ಶೋಷಣೆ ಅಥವಾ ಪೈಪೋಟಿಯನ್ನುಂಟು ಮಾಡಲು ಬಳಸುವುದಿಲ್ಲ ಎಂದು ಗುರುವಿನೆದುರಿನಲ್ಲಿ ಪ್ರಮಾಣ ಮಾಡದೇಕಾಗುತ್ತಿತ್ತು ಸಮಾಜದ ಕಲ್ಯಾಣಕ್ಕಲ್ಲದೆ ಅನ್ಯಥಾ ಬಳಸದ ನೀತಿ ಸಂಪನ್ನರಿಗೆ ಮಾತ್ರ ದೊರೆಯುತ್ತಿತ್ತು ಅಂಥ ಅಧಿಪ್ರಜ್ಞಾ ಶಿಕ್ಷಣವನ್ನು ಪಡೆದ ವ್ಯಕ್ತಿಗಳು ಕ್ಷುದ್ರ ಕಾಮನೆಗಳನ್ನು ಬಯಸುತ್ತಿರಲಿಲ್ಲ ಸಮಾಜದಿಂದ ದೂರ ಅರಣ್ಯದಲ್ಲಿದ್ದು ಬಿಡುತ್ತಿದ್ದರು ತಪಸ್ಸು ಅವರ ದಿನಚರಿಯಾಗಿರುತ್ತಿತ್ತು

ಇಂದಿನ ಸಮಾಜದಲ್ಲೂ ಸಹ ಶಿಕ್ಷಣದ ಮೂರು ಹಂತವನ್ನು ಅಳವಡಿಸಿಕೊಳ್ಳಲಾಗಿದೆ ಪೂರ್ವಪ್ರಾಥಮಿಕ ಮತ್ತು ಪ್ರಾಥಮಿಕ ಸ್ತರದ ಶಿಕ್ಷಣವನ್ನು ಕಡ್ಡಾಯ ಕಲಿಸಲೇದೇಕೆಂಬ ಹೊಣೆಯನ್ನು ಹೊತ್ತಿರುವ ಸರ್ಕಾರ ಅದನ್ನು ಸಾಧಿಸುವಲ್ಲಿ ವಿಫಲವಾಗಿದೆ ಅಂತೆಯೇ ಈ ಹಂತದಲ್ಲಿ ಹೆಚ್ಚು ಮಂದಿ ಶಿಕ್ಷಣಕ್ಕೆ ವಿದಾಯ ಹೇಳುತ್ತಾರೆ ಮುಂದಿನ ಪದವಿ ಪೂರ್ವ ಶಿಕ್ಷಣದ ಎರಡನೇ ಹಂತವನ್ನು ಮುಟ್ಟುವವರ ಸಂಖ್ಯೆ ಅಲ್ಪವಾಗಿದ್ದರೂ ಅವರಿಗೆ ಸರ್ವಾಂಗೀಣ ಶಿಕ್ಷಣವನ್ನು ಕೊಡುವಲ್ಲಿ ಈ ಶಿಕ್ಷಣ ಯಶಸ್ವಿಯಾಗದಿರುವ ಕಾರಣ, ಈ ಶಿಕ್ಷಣ ಪಡೆದವರಲ್ಲಿ ನಿರುದ್ಯೋಗಿಗಳು ವರ್ಷವರ್ಷಕ್ಕೂ ಹೆಚ್ಚು ಸಂಖ್ಯೆಯಲ್ಲಿ ದೆಳೆಯುತ್ತಿದ್ದಾರೆ

ಇನ್ನು ಅಧಿಪ್ರಜ್ಞಾಸ್ತರಕ್ಕೆ ಹೋಲಿಸಬಹುದಾದ ಸ್ನಾತಕೋತ್ತರ ಶಿಕ್ಷಣವು ಶೀಲಚಾರಿತ್ರ್ಯವನ್ನು ಕಡೆಗಣಿಸಿ ನೀಡಲಾಗುತ್ತಿರುವ ಕಾರಣದಿಂದಲೇ ಮಾರಕಾಸ್ತ್ರಗಳ ನಿರ್ಮಾಣದಲ್ಲೂ ಸಮಾಜ ಶೋಷಣೆಯ ತಂತ್ರವನ್ನು ರೂಢಿಸುವಲ್ಲಿಯೂ ಯಶಸ್ವಿಯಾಗಿರುವುದನ್ನು ನೋಡುತ್ತಿದ್ದೇವೆ ಈ ಶಿಕ್ಷಣವು ಒಂದೆಡೆ ಭಯದ ವಾತಾವರಣವನ್ನು ನಿರ್ಮಿಸಿದ್ದರೆ ಇನ್ನೊಂದೆಡೆ ಬಡವ-ಬಲ್ಲಿದರ ಮಧ್ಯೆ ಬಹುದೊಡ್ಡ ಕಂದಕವನ್ನು ನಿರ್ಮಿಸಿದೆ ಇದು ವಿಶ್ವಶಾಂತಿಗೆ ಮಾರಕವಾಗಿದೆ

ಸ್ವಸ್ಥ ಸಮಾಜದ ನಿರ್ಮಾಣವಾಗದ ಹೊರತು ವಿಶ್ವಶಾಂತಿ ನೆಲೆಸಲಾರದು ಸ್ವಸ್ಥ ಸಮಾಜದ ಆಧಾರ ಸ್ವಸ್ಥ ಕುಟುಂಬಗಳು ಸ್ವಸ್ಥ ಕುಟುಂಬಗಳ ನಿರ್ಮಾಣ ಸ್ವಸ್ಥ ವ್ಯಕ್ತಿಗಳಿದ್ದರೆ ಮಾತ್ರ ಸಾಧ್ಯ, ಹೆಣ್ಣಾಗಲೀ ಗಂಡಾಗಲೀ ತಮ್ಮ ಪ್ರಕೃತಿದತ್ತ ದೇಹ, ಮನ, ಬುದ್ಧಿ ಇವುಗಳನ್ನು ಗುರುಗಳ ಅಂತೇ ವಾಸಿಗಳಾಗಿದ್ದು, ಸುಸಂಸ್ಕಾರಗಳನ್ನು ಪಡೆದು, ದೈಹಿಕವಾಗಿ ಬಲಾಢ್ಯರೂ ನಿರೋಗಿಗಳೂ, ಮಾನಸಿಕವಾಗಿ ಸಮಾಜ ಬಾಂಧವರ ಕಷ್ಟಸುಖಗಳಿಗೆ ಸ್ಪಂದಿಸುವ ಸ್ವಸ್ಥ ಸಮತೋಲನವನ್ನು ಕಾಪಾಡಿಕೊಂಡು ಬರಬಲ್ಲ ಹೃದಯವಂತರೂ, ಬೌದ್ಧಿಕವಾಗಿ ಆಧುನಿಕ ವಿಜ್ಞಾನ ಹಾಗೂ ತಂತ್ರಜ್ಞಾನದಲ್ಲಿ ಪರಿಣತಿಯನ್ನು ಪಡೆದವರಾಗಿ ಸರ್ವರೊಂದಿಗೆ ಸಾಮಂಜಸ್ಯಮಯ ಜೀವನ ನಡೆಸುವವರಾಗಿ ದೆಳೆಯದೇಕು

ಅಂದ

ಮೇಲೆ ಇಂದಿನ ದುರಂತದಿಂದ ಮಾನವ ಕೋಟಿಯನ್ನು ಪಾರುಮಾಡಲು ಇರುವ ಸಾಧನವೆಂದರೆ ಗುರುಕುಲಗಳನ್ನು ಸ್ಥಾಪಿಸುವುದು ಈ ಗುರುಕುಲಗಳು ಸಮಾಜದ ನಿಯಂತ್ರಣದಿಂದ ಮುಕ್ತವಾಗಿರದೇಕು ಸಮಾಜದ ನೀತಿವಂತ ತಜ್ಞರ ಮಾರ್ಗದರ್ಶನದಲ್ಲಿರದೇಕು ಅದರ ನಿರ್ವಹಣೆಯ ಹೊಣೆ ಸಮಾಜದ್ದಾಗಿರದೇಕು ಅಲ್ಲಿ ಎಲ್ಲ ಮಕ್ಕಳಿಗೂ ಅನ್ನವಿದ್ಯೆಗಳೆರಡೂ ನಿಶ್ಶುಲ್ಕವಾಗಿ ದೊರೆಯುವಂತಿರದೇಕು

ಇನ್ನಾದರೂ ಈ ಬಗೆಯ ವ್ಯವಸ್ಥೆಯನ್ನು ಶಿಕ್ಷಣ ಕ್ಷೇತ್ರದಲ್ಲಿ ನಾವು ತಂದದ್ದೇ ಆದ ಭವ್ಯಭಾರತವನ್ನು ಅನತಿ ಕಾಲದಲ್ಲೇ ಕಟ್ಟಬಲ್ಲೆವು. ಆಗ ಭಾರತ ವಿಶ್ವಶಾಂತಿಯನ್ನು ಸ್ಥಾಪಿಸುವಲ್ಲಿ ಜಗದ್ಗುರುವಾಗಿ ತನ್ನ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲ ಸಮರ್ಥ ರಾಷ್ಟ್ರವಾಗಬಲ್ಲದು

ಅಂಥ ಸಂಕಲ್ಪಶಕ್ತಿ ಹಾಗೂ ಕರ್ತವ್ಯ ನಿಷ್ಠೆ ದೆಳೆಯುವಂತಾಗಲೆಂದು ಹಾರೈಸುತ್ತೇವೆ

(ಕೃಪೆ- ಶ್ರೀಕರ-ಪ್ರ-ಡಿ ವಿ ಜಿ ಪ್ರತಿಷ್ಠಾನ, ಕೋಲಾರ)

ಜ್ಯೋತಿಯಿಂದಲಿ ನೇತ್ರ ರಾತ್ರಿಯಲಿ ಕಾಂಬಂತೆ
ಸೂತ್ರದಿಂ ಧಾತನರಿವಂತೆ ಶಿವನ ಗುರು
ನಾಥನಿಂದರಿಗು ಸರ್ವಜ್ಞ

# ಮುಳಬಾಗಿಲಿನ ಶ್ರೀಪಾದರಾಜರು

- ಡಾ|| ಎನ್. ಕೆ. ರಾಮಶೇಷನ್.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಅವಿಸ್ಮರಣೀಯ ಹಾಗೂ ಧ್ರುವವಾಗಿ ನಿಲ್ಲಬಲ್ಲ ಅಂತಃಸತ್ವವುಳ್ಳ ಸಾಹಿತ್ಯ ಪ್ರಾಕಾರಗಳೆಂದರೆ ಕ್ರಿ.ಶ ೧೨ ನೇ ಶತಮಾನದಲ್ಲಿ ಅರಳಿದ ಶಿವಶರಣರ ಸುಂದರ ವಚನಸಾಹಿತ್ಯ ಹಾಗೂ ಹದಿನಾಲ್ಕನೆಯ ಶತಮಾನದ ಆಚೆಗೆ ಮೂಡಿಬಂದು ಇಂದಿಗೂ ಇರುವ ಹರಿದಾಸ ಸಂಪದ. ಎರಡೂ ಆಧ್ಯಾತ್ಮಿಕ ತುಂಬಿದ ಭಾವಗೀತ ಎಂದರೂ ಸರಿಯೇ ಮೊದಲಿನದರಲ್ಲಿ ಮಾತಿರದ ಗೇಯಗುಣವುಳ್ಳ ಗದ್ಯಲಯ, ಎರಡನೆಯದರಲ್ಲಿ ಶ್ರುತಿ ಸುಭಗ ಕೀರ್ತನ ಸಂಪದ ಶಿವಭಕ್ತಿ ಹರಿಭಕ್ತಿ ಬಿತ್ತರಿಸಿದ ಕನ್ನಡ ದೇಸಿ ಅರಳಿಸಿದ ಹೂಗಳಿವು ಎಂದರೂ ತಪ್ಪಾಗದು ಇದರಲ್ಲಿ ನಾವೀಗ ಪ್ರಸ್ತುತ ವಿಚಾರ ಮಾಡುವ ಹರಿದಾಸ ಸಾಹಿತ್ಯ ಸಂಪದ ಎಂದೊಡನೆಯೇ ಅಲ್ಲಿ ತಮ್ಮ ಶ್ರೀಪಾದದ ಮುದ್ರೆಯನ್ನೊತ್ತಿದ ಶ್ರೀಪಾದರಾಜರು ಆದ್ಯಪ್ರವರ್ತಕರಾಗಿ ವಿಜೃಂಭಿಸುತ್ತಾರೆ.

ಸಾಹಿತ್ಯ - ಕಲೆ - ಸಂಸ್ಕೃತಿ - ಧರ್ಮ ಸಂವರ್ಧನೆಗಾಗಿ ತನ್ನದೇ ಆದ ಸುವ್ಯವಸ್ಥಿತ ರೀತಿಯಲ್ಲಿ ಸುಮಾರು 250 ವರ್ಷಕಾಲ ಬಾಳಿ ಬೆಳಗಿದ ವಿಜಯನಗರಕ್ಕೆ ಮೂಡಲ ಬಾಗಿಲಿನಂತಿದ್ದ (ಪೂರ್ವಕ್ಕೆ ಇರುವ) ಮುಳಬಾಗಿಲಿನ ಸಮೀಪವಿರುವ ನೃಸಿಂಹತೀರ್ಥ ಪರಿಸರದ ಶಾಂತತೆ, ಅಲ್ಲೇ ಪೂಜ್ಯ ಶ್ರೀಪಾದರಾಜರು ನೆಲೆನಿಂತು ತೊಂಭತ್ತಂಟು ವರ್ಷಗಳ ಸಾರ್ಥಕ ಬದುಕನ್ನು ನಡೆಸಿ ವೃಂದಾವನಸ್ಥರಾದ ಸ್ಥಳ ಇಂದಿಗೂ ಎಲ್ಲರನ್ನೂ ತನ್ನೆಡೆಗೆ ಸೆಳೆಯುತ್ತ ಹರಿಭಕ್ತನಾಗಂದು ಪ್ರೀತಿಯಿಂದ ಕರೆಯುತ್ತದೆ ಕರದು ಆದರಿಸುತ್ತದೆ ಶ್ರೀಪಾದರಾಜರ ಪರಮಪ್ರಿಯ ಶಿಷ್ಯರಾಗಿ ವ್ಯಾಸಕೂಟ ದಾಸಕೂಟಗಳನ್ನು ಸಮನ್ವಯಗೊಳಿಸಿ ಮುನ್ನಡೆಸಿದ, ಹಾಗೂ ಕರ್ನಾಟಕ ಕನ್ನಡದ ಸಂಗೀತಕ್ಕೆ ಪಿತಾಮಹ ಸ್ವರೂಪರಾದ ಪುರಂದರ ದಾಸರನ್ನು, ದಾಸರಲ್ಲಿ ಕವಿಪುಂಗವರೆನ್ನಿಸಿದ ಕನಕದಾಸರನ್ನು, ಕನ್ನಡ ನಾಡಿಗೆ ಶಾಶ್ವತ ಕೊಡುಗೆಯಾಗಿ ನೀಡಿದ - ವ್ಯಾಸರಾಯರು ತಮ್ಮ ಗುರುವರ್ಯರನ್ನು ಪೂಜಿಸುವುದನ್ನು ಗುರುತಿಸುವ ಒಂದು ಸುಂದರ ಶ್ಲೋಕ ಹೀಗೆ ನಡೆಯುತ್ತದೆ-

ಯತ್ ಬೃಂದಾವನ ಸೇವಯಾ ಸುವಿಮಲಾಂ
ವಿದ್ವಾನ್ ಪಶೂನ್ ಸಂತತಿಂ
ಧ್ಯಾನ ಜ್ಞಾನ ಮನಲ್ಪ ಕೀರ್ತಿ ನಿವಹಂ
ಪ್ರಾಪ್ನೋತಿ ಸೌಖ್ಯಂ ಜನಃ
ತಾಂ ವಂದೇ ನರಸಿಂಹತೀರ್ಥ ನಿಲಯಂ
ಶ್ರೀ ವ್ಯಾಸರಾಟ್ ಪೂಜಿತಂ
ಧ್ಯಾಯಂತಂ ಮನಸಾ ನೃಸಿಂಹ ಚರಣಂ
ಶ್ರೀ ಪಾದರಾಜಂ ಗುರುಂ

ಮುಳಬಾಗಿಲಿನ ಶಾಂತ ನೃಸಿಂಹ ತೀರ್ಥ ಪರಿಸರದಲ್ಲಿ ಇಂದಿಗೂ ಪುಣ್ಯಪ್ರದ ತಾಣವಾಗಿದೆ ಶ್ರೀಪಾದರಾಯಂ ವೃಂದಾವನ ಗಂಗಾ ಮಾತೆಯು ನೃಸಿಂಹತೀರ್ಥದಲ್ಲಿ ಉದ್ಭವಿಸಿದ ಸಂಗತಿ ಇಂದು ಕೂಡ ಸುವಿದಿತ ಒಂದೆಡೆ ಅಕ್ಷೋಭ್ಯತೀರ್ಥರು ಅಂಗಾರದಲ್ಲಿಯೇ ಬರೆದು ಮೂಡಿಬಂದಿರುವ ಯೋಗನರಸಿಂಹಮೂರ್ತಿಯಿದ್ದರೆ, ಇನ್ನೊಂದೆಡೆ ವ್ಯಾಸರಾಯರು ಪ್ರತಿಷ್ಠಿಸಿರುವ ಆಂಜನೇಯಮೂರ್ತಿ ವ್ಯಾಸರಾಯಸ್ವಾಮಿಗಳು ತಮ್ಮ ಅಧ್ಯಯನ ಸಮಯದಲ್ಲಿ ಕುಳ್ಳಿರುತ್ತಿದ್ದ ಪುಟ್ಟಗುಹೆಯೊಂದಿದೆ ಶ್ರೀಪಾದರಾಜರು ಭೌತಿಕ ಶರೀರದಿಂದ ಮುಕ್ತರಾಗಿದ್ದರೂ ಅವರ ತೇಜಸ್ಸಿನಿಂದ ಕೂಡಿದ ಆತ್ಮಶಕ್ತಿ ಇಂದಿಗೂ ವೃಂದಾವನ ಸಾನ್ನಿಧ್ಯದಲ್ಲಿ ಇದೆ ಎಂದು ಆಸ್ತಿಕ ಭಕ್ತರ ದೃಢನಂಬಿಕೆಯಾಗಿದೆ ಮೇಲೆ ಉದ್ಧರಿಸಿರುವ ಶ್ಲೋಕದಂತೆ ಈ ವೃಂದಾವನವನ್ನು ಶುದ್ಧ ಭಕ್ತಿಯಿಂದ ಸೇವಿಸುವವರಿಗೆ ಸರ್ವಾಭೀ



ಷ್ಟಗಳೂ ನೆರವೇರುತ್ತವೆ ಈ ಪರಿಯಲ್ಲಿಯೇ ಅನಂತರ ಮೂಡಿಬಂದ ಹರಿದಾಸರು ವಾದಿರಾಜರೂ, ವಿಜಯದಾಸರೂ ನಿರೂಪಿಸಿದ್ದಾರೆ ಹರಿದಾಸ ಸಾಹಿತ್ಯ ಸಂಪದದ ಆದ್ಯಪ್ರವರ್ತಕರೆನಿಸಿದ ಶ್ರೀಪಾದರಾಜರನ್ನು ಕುರಿತ ಪರಿಚಯಾತ್ಮಕ ಸಾಲುಗಳು ಈ ಲೇಖನದ ಉದ್ದೇಶ ಶ್ರೀಪಾದರಾಜರ ಬದುಕಿನ ಎಳೆಗಳನ್ನು ತಿಳಿಸುವುದರಿಂದ ಲೇಖನದ ವಿಸ್ತಾರ ಹೆಚ್ಚುಗೊಳ್ಳುತ್ತದೆಯೆಂಬುದರಿಂದಾಗಿ ಅವರು ಹರಿದಾಸ ಸಾಹಿತ್ಯವನ್ನು ಬೆಳೆಸಲು ಹರಿದಾಸ ಪಡೆಯನ್ನು ತಯಾರು ಮಾಡಿದುದನ್ನು ತಿಳಿಸುವುದು ಲೇಖನದ ಧ್ಯೇಯ

ಸ್ವರ್ಣವರ್ಣತೀರ್ಥರಿಂದ ಸನ್ಯಾಸ ದೀಕ್ಷೆ ಪಡೆದ ಶ್ರೀಪಾದರಾಜರು ದೂರದ ತಮಿಳುನಾಡಿನ ಶ್ರೀರಂಗದಲ್ಲಿರುವಾಗ ಅಲ್ಲಿಯ ಶ್ರೀರಂಗನಾಥಸ್ವಾಮಿಯ ದೇವಾಲಯದಲ್ಲಿ ಅನುನಿತ್ಯ ನಡೆಯುತ್ತಿದ್ದ ಪೂಜಾಕ್ರಮ ಆಳ್ವಾರುಗಳ ನಾಲಾಯಿರ ದಿವ್ಯಪ್ರಬಂಧ (ತಿರುವಾಯ್ಮೊಳಿ - ಶ್ರೀವದನದ ನುಡಿ - ಇದೊಂದೇ ಶ್ರೀ ವೈಷ್ಣವ ಪ್ರಬಂಧಗಳಿಗೆ ಇರುವ ಹೆಸರು) ಪಾಶುರವನ್ನು ಅರ್ಪಿಸಿದಾಗೆಲ್ಲ ತಾವೂ ತಮ್ಮ ದಿನನಿತ್ಯ ಪೂಜಾಕ್ರಮದಲ್ಲಿ ಆಚಾರ್ಯ ಪ್ರಣೀತ ಗ್ರಂಥ ವೇದೋಪನಿಷತ್ತುಗಳ ಸಾಲುಗಳ ಪಠಣದ ಸಂಗಡವೇ ಪರಿಮಳ ದ್ರವ್ಯವಾಗಿ ಕನ್ನಡದಲ್ಲಿ ಕೃತಿ ಕೀರ್ತನೆಯೇಕೆ ರಚಿಸಿ ಹಾಡಬಾರದು ಎಂಬ ಪ್ರಶ್ನೆ ಹುಟ್ಟಿ ಅದೇ ಭಾವ ಪ್ರಬಲಿಸುತ್ತಿತ್ತು ಅದರ ಜತೆಗೆ ಈ ಹಿಂದಿನ ೧೨ನೇ ಶತಮಾನದಲ್ಲಿದ್ದ ವಚನ ಸಾಹಿತ್ಯದ ಕನ್ನಡ ನುಡಿಸಮುಚ್ಚಯ, ಶ್ರೀಪಾದರಾಯರಿಗೆ ಕನ್ನಡದಲ್ಲಿ ಕೃತಿರಚನೆಯ ಸ್ಫೂರ್ತಿ ನೀಡಿರಬೇಕು ಒಟ್ಟಾರೆ ಶ್ರುತಿಸುಭಗ ಕೀರ್ತನ ಸಂಪದ ಶ್ರೀಪಾದರಾಜರ ಸಾಧನೆ - ಅದೇ ಸಾಹಿತ್ಯ ದಾಸ ಸಾಹಿತ್ಯ ಲಜ್ಜೆ ಬಿಟ್ಟು ಕಾಲಿಗೆ ಗೆಜ್ಜೆ ಕಟ್ಟಿ ಹೆಜ್ಜೆ ಹಾಕುತ್ತ ನರ್ತಿಸುತ್ತ, ನುಡಿಸುತ್ತ, ನಾಗನ ಸಜ್ಜೆಯೊಳು ಪವಡಿಸಿದ ಶ್ರೀಶನನ್ನು ಕೀರ್ತಿಸುವುದೇ ಅವರ ಭಕುತ ಹೃದಯದ ಅಭೀಪ್ಸೆ, ದಾಸಸಾಹಿತ್ಯದಲ್ಲಿ ಕೀರ್ತನೆಗಳ ಜೊತೆಗ ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ ಮೊದಲಾದ ಪ್ರಕಾರಗಳಲ್ಲಿಯೂ ಕೃತಿಗಳನ್ನು ರಚಿಸಿ ನೀಡಿರುವ ಯಶಸ್ಸು, ಕವಿಹೃದಯ, ಶ್ರೀಪಾದ ರಾಜರದ್ದು

ಶ್ರೀಪಾದರಾಯರ ಅಂಕಿತ ರಂಗವಿಠಲ ಎಂಬುದಾಗಿ ಆ ಅಂಕಿತದಲ್ಲಿ ಅವರದಷ್ಟು ಕೀರ್ತನೆಗಳನ್ನು ರಚಿಸಿದ್ದರೋ ಏನೂ ದೊರತಿರುವುದು ನೂರಾರು ಮಾತ್ರವೇ ಶ್ರೀಹರಿಭಕ್ತಿ, ಹರಿಸರ್ವೋತ್ತಮತ್ವ ಪ್ರತಿಪಾದನೆ, ಆಚಾರ್ಯ ಮಧ್ವನಿಷ್ಠೆ, ಮಧುರ - ವಾತ್ಸಲ್ಯ ಆತ್ಮ ನಿವೇದನೆ ನಿರೂಪಣೆ - ಇವೆಲ್ಲವನ್ನು ತಮ್ಮ ಕೀರ್ತನೆಗಳಲ್ಲಿ ಕಂಡರಸಿರುವ ಶ್ರೀಪಾದರಾಜರ ಕವಿಹೃದಯ ಅನೇಕ ಭಕ್ತಿಸ್ಯಂದಿ ಭಾವಗೀತೆಗಳನ್ನೇ ಹಾಡಿರುವುದು ಮನನೀಯ ಅಂಥ ಕೆಲವೊಂದು ತುಣುಕುಗಳನ್ನು ಇಲ್ಲಿ ನೋಡಬಹುದು-

ಅಂಬರದಾಳವನು ಇನ ಶಶಿಗಳಲ್ಲದೆ
(ಅಂಬರದಲಾಡುವ) ಪಕ್ಷಿ ತಾವು ಬಲ್ಲವೆ?
ಜಲದ ಪ್ರಮಾಣವ ತಾವರೆಗಳಲ್ಲದೆ
ಮೇಲಿದ್ದ ಮರಗಿಡ ಬಳ್ಳಿಗಳು ಬಲ್ಲವೆ?
ಮಾವಿನ ಹಣ್ಣಿನ ರುಚಿ ಅರಗಿಳಿಗಳಿಗಲ್ಲದೆ
(  ..) ಕಾಗೆಗಳು ತಾವು ಬಲ್ಲವೇ?
ನಿನ್ನ ಮಹಿಮೆ ನಿನ್ನ ಭಕುತರು ಬಲ್ಲರು
ಮತ್ತನ್ಯರೇನು ಬಲ್ಲರಯ್ಯ

* * * * * * * * * * * * * *

ಭಕ್ತ ಪರಾಧೀನನ ಭೃತರೊಡೆಯನೆ
ಭಕ್ತರ ಸಲಹಯ್ಯ ನಮೋ ರಂಗ ವಿಠಲ

ತಾತಾ ತಾ ತಾ ತಾ ರಂಗ ನಿನ್ನ ಪಾದ
ಥೈಥೈ ಥೈ ಥೈ ಥೈಯೆಂದು ಕುಣಿಯುತ

ಇಂದಿನಿರುಳಿನ ಕನಸಿನಲ್ಲಿ ಬಂದು
ಮುಂದೆ ನಿಂದುದ ಕಂಡೆನೆ ಗೋವಳಿಗ

ಮೊಲ್ಲಮಲ್ಲಿಗೆಚೊಲ್ಲಯದ ಒಲ್ಲಣದಶಿರ
ದಲ್ಲಿ ಗುಂಜೆಯ ದಂಡೆಯ ಚೆಲ್ವ ಕಂಗಳ
ಗೋಪಿಯರ ಮೇಲೆ ಕಡೆಗಣ್ಣಿ
ಚೆಲ್ಲು ತೊಯ್ಯನೆ ನಡೆದ ಗೋವಳನ

ಭಕ್ತನಾದವನು ತನ್ನ ಅಂತರಂಗವನ್ನು ಭಗವಂತನಲ್ಲಿ ತೆರೆದು ತೋರುವನು ಪಶ್ಚಾತ್ತಾಪದ ನೋವು ತಳಮಳ ಹೃದಯದ ಒಳಗುದಿಗಳನ್ನು ಶ್ರೀಪಾದರಾಜರು ತಮ್ಮ ಸುಳಾದಿಯೊಂದರಲ್ಲಿ ನಿರೂಪಿಸುವ ಪರಿಯಿದು-

ಅನಂತ ಕಾಲಗಳಲ್ಲಿ ನಿನ್ನ
ನಾನರಿಯದೆ ಭವಗಳಲ್ಲಿ ಬಂದೆನು
ಅನಂತ ಕಾಲದಲ್ಲಿ
ನಿನ್ನವನೆನಿಸದ ಮೂರುಖನಾದನೂ
ಅನಂತ ಕಾಲದಲಿ ನಿನ್ನ
ಚರಣಗತಿಯಿಲ್ಲದ ನೊಂದೆನೂ
ಅನಂತ ಕಾಲದ ಅದಾವ
ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ, ಅದಾವ
ಪುಣ್ಯದಿಂದಲೆನ್ನ ಮನ
ನಿನ್ನ ಲೆರಗಿತೋ ನೋಯದಂತೆ
ಎನ್ನ ಪೊರೆದು
ಪಾಲಿಸೋ ದೀನನಾಥ
ಶ್ರೀರಂಗ ವಿಠಲ

ಇದೇ ಮೊರೆಯು ಹೊಸಲಾಗಿ ಹರಿಯುತ್ತದೆ - ಶ್ರೀಪಾದರಾಜರ ಇನ್ನೊಂದು ಕೀರ್ತನೆಯಲ್ಲಿ -

ಹರಿನಾರಾಯಣನೆಂದು
ಕರವೆತ್ತಿ ಮುಗಿದೊಮ್ಮೆ
ಮರದು ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿರಿತುಲಸಿ ಪುಷ್ಪವನ್ನು
ಕರವೆತ್ತಿ ನೀಡಲಿಲ್ಲ ಕೃಷ್ಣ
ಸರ್ವಜ್ಞರಾಯರು ವಿರಚಿಸಿದ ಗ್ರಂಥವನು
ದರುಶನವೆ ಮಾಡಲಿಲ್ಲ ಕೃಷ್ಣ
ಸ್ಮರಿಸಲಾಗದ ಪಾಪಸ್ಮರಣೆ
ಪೂರ್ವಕ ಮಾಡಿ ಸ್ಥಿರಭಾವನಾದೆನೊ ಕೃಷ್ಣ

- ಎಂಬುವುದರಲ್ಲಿ ಶ್ರೀಪಾದರಾಜರ ಹರಿದಾಸ್ಯಸೇವಾಭಾವವೂ ವ್ಯಕ್ತವಾಗುತ್ತದೆ ಹಾಗೂ ಸರ್ವಜ್ಞರಾಯರು - ಮಧ್ವಾಚಾರ್ಯರ ಬಗ್ಗೆ ರಾಜರಿಗಿದ್ದ ನಿಷ್ಠೆಯೂ ತಿಳಿಯುತ್ತದೆ ಚರಣಗತಿ ಎಂಬ ಪದಪ್ರಯೋಗ ಭಕ್ತ - ಭಗವಂತರಲ್ಲಿ ಏಳಿಸುವ ಪ್ರಿಯ ಅನುಭವವನ್ನು ಬಿಂಬಿಸುತ್ತದ ಹೀಗೆಯೇ ಶ್ರೀಪಾದರಾಜರು ರಚಿಸಿರುವ ಮಧುರಭಾವಯುತ ಅನೇಕ ಕೃತಿಗಳು ಹೃದಯಂಗಮ ಭಕ್ತಿ ಗೀತೆಗಳಾಗುತ್ತವೆ ಇಲ್ಲೆಲ್ಲ ಅವರ ನಿರೂಪಣಾ ನೈಪುಣ್ಯ ಆ ಸಾಲುಗಳನ್ನು ಆಹ್ಲಾದಕರವಾಗಿಸುತ್ತವ

"ಒಲ್ಲನವ್ವ ಲಕುಮಿಯನಲ್ಲ
ಬಾರದಿದ್ದರೆ ತನು ಹೊರೆಯ ಲೊಲ್ಲನವ್ವಾ"

* * * * * * * * * * * * * * * *

ಭೃಂಗ ನಿನ್ನಟ್ಟಿದನೇ
ಶ್ರೀರಂಗ ಮಧುರಲಿ ನಿಂದು
ಅಂಗಜಲುಬ್ಧಕ ಪೂಗೋಲಂಗಳ
ತಡೆಯಸಿಕ್ಕಿ
ಅಂಗನೇ ರಂದೋ ಹುಲ್ಲ ಮೃಗಂಗಳಿಗ
ಗುರಿಯಚ್ಚು ಒಲಿಸುತ್ತೈದಾನ ಹೇ ಕಿತವಾ

ಎಂಬುವ ಭ್ರಮರಗೀತೆಯಲ್ಲಿ ದುಂಬಿಯ ಧ್ವನಿಯಂತೆಯೇ ಪ್ರಣವ ನಾದವೂ ಕೇಳಿಬರುತ್ತವೆ

ಇಹವ ಸಂಸಾರ - ಎಲ್ಲ ಕುರಿತಂತೆ ಎಚ್ಚರಿಕೆಯ ಸಾಲುಗಳನ್ನು ಶ್ರೀಪಾದರಾಜರು ಆಡುವ ರೀತಿಯೇ ಅನನ್ಯವಾದದ್ದು -

ಕಂಬಳಿಯ ಬುತ್ತಿಯಲಿ
ಕಸವನಾರಿಸುವರುಂಟೆ
ಅಂಬುಜೋದರನ ನೆಲೆ
ಅರಿಯದ ದುರಾತುಮರು
ದೆಂಬಿಡದೆ ಸುಖವನರಸುವ ರುಂಟೆ ? ಉದ
ರಂಭರಣಾದಿ ಢಾಂಬಿಕರು
ಇಹಪರಕ್ಕೆ ಬಾಹ್ಯರೆಂದೂ
ಶಂಬರಾಂತಕ ಪಿತ ರಂಗ
ವಿರಲ ರೇಯನ್ನು ಪಾ
ದಾಂಬುಜೋದ್ಭ್ರಮರದೊಳು(?)
ಮಿಗೆ ದೂರಾದವರು
ದೆಂಬಿಡದೆ ಸುಖವ ನರಸಿವರುಂಟೆ

- ಇದರ ಜೊತೆಗೆ ಶ್ರೀರಂಗದಲ್ಲಿಯೇ ಬಹಳ ಕಾಲ ನೆಲೆಸಿದ್ದರಿಂದಾಗಿ ಅವರ ಮನಸ್ಸು ರಂಗನೆಂದೊಡನೆ ಮಾರುವೋಗುತ್ತದೆ. ರಂಗನಾಥನನ್ನು ಕುರಿತು ಅವರು ರಚಿಸಿರುವ ಕೀರ್ತನೆಗಳಲ್ಲಿ "ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ" ಎಂಬ ರಚನೆ ಸುವಿಖ್ಯಾತ ಆಗಿ ಜನಮನ ಪ್ರಿಯಾವಾದದ್ದು ಆಗಿದೆ

ಕಂಗಳಿದ್ಯಾತಕೋ ಕಾವೇರಿ
ರಂಗನ ನೋಡದ || ಪ ||
ಜಗಂಗಳೊಳಗೆ ಮಂಗಳ ಮೂರುತಿ
ರಂಗನ ಶ್ರೀಪಾದಂಗಳ ನೋಡದ || ಅ ಪ ||

ಹಾರ ಹೀರ ವೈಜಯಂತಿ
ತೋರ ಮುತ್ತಿನ ಹಾರ ಧರಿಸಿ
ತೇರನೇರಿ ಬೀದಿಲಿ
ಮೆರೆವ ರಂಗನ ನೋಡದ

ಇದೇ ರೀತಿಯಲ್ಲಿ ಶ್ರೀಪಾದರಾಜರು ತಿರುಪತಿಯ ಶ್ರೀನಿವಾಸನನ್ನು ಕುರಿತು ಹಾಡಿದ ಕೃತಿಯೂ ತುಂಬ ಜನಪ್ರಿಯವಾಗಿದೆ

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀ ವೆಂಕಟೇಶ || ಪ ||

ನಾಲಿಗ್ಗೆ ಭೂಷಣ ನಾರಾಯಣ ನಾಮ
ಕಾಲಿಗ್ಗೆ ಭೂಷಣ ಹರಿಯಾತ್ರೆಯು
ಆಲಯಕ್ಕೆ ಭೂಷಣ ತುಲಸಿ ವೃಂದಾವನ ವಿ
ಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯು

ವಾತ್ಸಲ್ಯ ಭಾವವನ್ನು ಬಿತ್ತರಿಸುವ ಕೃತಿಯೊಂದು ಅವರ ಭಾಷೆಯಿಂದಲೂ ಮನ ಸೆಳೆಯುತ್ತವೆ -

ಪೋಪು ಹೋಗೋಣ ಬಾರೊ ರಂಗ
ಪೋಪು ಹೋಗೋಣ ಬಾರೊ

ಜಾಹ್ನವಿಯ ತೀರವಂತೆ
ಜನಕರಾಯನ ಕುವರಿಯಂತೆ
ಜಾನಕಿಯ ವಿವಾಹವಂತೆ
ಜಾಣನೀ ಬರದೇಕಂತೆ

- ಇಲ್ಲಿಯ ಕನ್ನಡ ದೇಸೀ ಪ್ರಯೋಗ ಕೂಡ ಮನನೀಯ ಇದರಂತೆಯೇ ಬಾಲಕೃಷ್ಣನ ತುಂಟ, ಮಾನವ ಸಹಜ ಶಿಶುರೂಪದಲ್ಲಿ ಆಗಾಗ ಕಂಡುಬರುವ ದೈವೀ ದರ್ಶನ - ಎಲ್ಲವೂ ಶ್ರೀಪಾದರಾಜರ ಕೃತಿಗಳಲ್ಲಿ ಕಡುಬರುತ್ತದೆ

ವಾಸುದೇವ ನಿನ್ನ ಮರ್ಮ ಕರ್ಮಗಳ
ದೇಶದೇಶದಲ್ಲಿ ಪ್ರಕಟಿಸಲೋ

ಹಿಡಿಯವಲಕ್ಕಿಗೆ ಮೆಚ್ಚಿ
ಸುಪದವನು ಕೊಟ್ಟ
ದೆಡಗತನವನಿಲ್ಲಿ ಹೇಳಲೋ
(ಸುಧಾಮ ಪ್ರಸಂಗ)

ನಿನ್ನ ಮಗನ ಲೀಲೆಯ
ತಾಳಲಾರೆವೆ ನಾವು
ತರಳನ ದುಡುಕು ಹೇಳಬಾರದೆ
ಗೋಪಾಲಕೃಷ್ಣಗೆ ಬುದ್ಧಿ ಅಮ್ಮ

* * * * * * * * * * * * * * * *

ಇನ್ನು ಚೆನ್ನಾಯಿತು ತಿಳಿದವಳಲ್ಲವೆ
ಈ ಕೇಳೆ ಯಶೋದೆ

* * * * * * * * * * * * * * * *

ಮುಜ್ಜಗವನೆಲ್ಲ ದೊಜ್ಜೆ ಯೊಳಗಿಟ್ಟು
ಗೆಜ್ಜೆಯ ಕಟ್ಟಿ ತಪ್ಪೆಜ್ಜೆಯ ನಿಕ್ಕುತ
ಬಾರೋ ನಮ್ಮ ಮನೆಗೆ ಗೋಪಾಲಕೃಷ್ಣ

* * * * * * * * * * * * * * * *

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ

ಎನ್ನುವಂತೆಯೇ ಪರಮ ಪ್ರೇಮ ಸ್ವರೂಪವಾದ ಭಕ್ತಿಯ ಮೂಲಕ ಶ್ರೇಷ್ಠ ಭಕ್ತರಾಗಿ ಶ್ರೀಪಾದರಾಜರು ಮೆರೆಯುತ್ತಾರೆ

ಯಾಕೆ ಪುಟ್ಟಿಸಿದೆ ನೀ ಸಾಕಲಾರದೆ
ಜಗದೇಕ ಕಾರಣ ಪುರುಷನೆ ಕೃಷ್ಣ
ಏಕೋ ವಿಷ್ಣುಃ ಎಂಬ ವಾಕು ಚಿಂತಿಸದೆ
ಇಂತು ಕಾಕು ಮಾಡುವುದುಚಿತವೇ ಕೃಷ್ಣ

-ಎಂದು ಮೊರೆಹೊಕ್ಕುತ್ತಾರೆ

ರಂಗ ಮನೆಗೆ ಬಾರೋ ಕೃಪಾಂಗ
ರಂಗ ಕಲುಷ ವಿಭಂಗ ಗರುಡ
ತುರಂಗ ನವ ಮೋಹನಾಂಗ ಶ್ರೀರಂಗ

ಎಂದು ಹಾಡುತ್ತ -

"ಉಂಗುರಂಗಳ ನಿನ್ನ ಅಂಗುಲಿಗಿತ್ತು
ಕಂಗೊಳಿಸಲು ನೋಡುವೆ"

- ಎಂದು ತಮ್ಮ ಮನದಭಿಲಾಷೆಯನ್ನು ತ‌ಹತಹಿಸುವ ರೀತಿಯಲ್ಲಿ ತೋಡಿಕೊಳ್ಳುತ್ತಾರೆ

ಭಕುತಿ ಸಾಹಿತ್ಯಕ್ಕೆ ಸಮಾಜ ಸುಧಾರಣೆಗೆ ತಮ್ಮದೇ ಆದ ಸಾತ್ವಿಕ ರೀತಿಯ ಕೊಡುಗೆಯಿತ್ತ ಶ್ರೀಪಾದರಾಜರು ಹೆಸರನ್ನು ನೆನೆದುಕೊಂಡರೆ ಸಾಕು ನೆಮ್ಮದಿಯ ಬದುಕು ಹಾಗೂ ಸುಖಭೋಜನವು ದೊರೆಯುವುದು ದಿಟ ಎಂಬುದು ಮಧ್ವಮತದ ಅನುಯಾಯಿಗಳು ಸಹೃದಯರು ತಿಳಿಸುವ ವಾಡಿಕೆ ಅವರು ಧ್ರುವಾಂಶ ಸಂಭೂತರು ಹಾಗೂ ಸುಖಪ್ರಾರಬ್ಧ ಜಾತಕರೆಂದೇ ಪ್ರಸಿದ್ಧ.

ಒಟ್ಟಾರೆ ತೊಂಬತ್ತು ವರ್ಷದ ನಿಡಿದಾದ ಸಾರ್ಥಕ ಬದುಕನ್ನು ನಡೆಸಿದ ಶ್ರೀಪಾದರಾಜರ ಸಂತ ಸಂದೇಶ, ಹರಿಭಕ್ತಿ ಪ್ರಸಾರ, ಹರಿಸರ್ವೋತ್ತಮತೆಯ ಪ್ರತಿಪಾದನೆ, ಮಧ್ವನಿಷ್ಠೆ ಸಾಹಿತ್ಯ ರಚನೆ - ಇವೆಲ್ಲದರೊಡನೆ ಒಂದು ಭಕ್ತಿಯ ಆಂದೋಲನಕ್ಕೇ ಶ್ರೀಕಾರದ ಮೇಲುಪಂಕ್ತಿ ಹಾಕಿದುದನ್ನು ಯಾರೂ ಮರೆಯುವಂತಿಲ್ಲ ಅವರ ನಂತರ ಅವರ ಪ್ರಭಾವದಿಂದ ತೆಲುಗಿನಲ್ಲಿ ವಾಗ್ಗೇಯಕಾರರೆಂದು ಪ್ರಸಿದ್ಧರಾದ ತ್ಯಾಗರಾಜಸ್ವಾಮಿಗಳು, ವ್ಯಾಸರಾಜರು, ಪುರಂದರದಾಸರು ಕನಕದಾಸರು, ಕವಿ - ಹರಿದಾಸ - ವೀರ ಮಧ್ವನಿಷ್ಠೆಯ ಸೋದೆಯ ವಾದಿರಾಜಸ್ವಾಮಿಗಳು, ಹಾಗೂ ಆ ನಂತರದ ಶ್ರೀ ರಾಘವೇಂದ್ರ ಸ್ಫೂರ್ತಿ ಪಡೆದ ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು - ಎಲ್ಲ ಹರಿದಾಸರ ಆಮ್ನಾಯ ಮಾನವಾದ ರಚನೆಗಳು ಸ್ಥಿರವಾಗಿ ಜನಮನದಲ್ಲಿ ಉಳಿದು ಜನಜಿಹ್ವೆಯಲ್ಲಿ ನಲಿದು ಕನ್ನಡನಾಡಿನಲ್ಲಿ ನಡೆದಿವೆ ಎಂದರೆ ಇವಕ್ಕೆಲ್ಲ ಓನಾಮ ಹಾಕಿದ ಶ್ರೀಪಾದರಾಜರು ಮೂಡಲ ರವಿ ಆಗಿ ಉಳಿದಿದ್ದಾರೆ ಎನ್ನುವಲ್ಲಿ ಅತಿಶಯೋಕ್ತಿಯಿಲ್ಲ

# ಸ್ತೋತ್ರರತ್ನ - ನಾಲ್ಕು ಪದ್ಯ

ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ

ಸ್ಫುರತ್ ಕಿರೀಟ ಅಂಗದ ಹಾರ ಕಂಠಿಕಾ
ಮಣೀಂದ್ರ ಕಾಂಚೀಗುಣ ನೂಪುರಾದಿಭಿಃ
ರಥಾಂಗ ಶಂಖ ಅಸಿ ಗದಾ ಧನುರ್ವರೈಃ
ಲಸತ್ ತುಲಸ್ಯಾ ವನಮಾಲಯಾ ಉಜ್ವಲಂ
|| ೩೬ ||

ಥಳಥಳಿಸುತ್ತಿರುವ ಕಿರೀಟ, ಭುಜಕೀರ್ತಿ, ಮುತ್ತಿನಸರ, ಕಂಠೀಹಾರ, ಕೌಸ್ತುಭಮಣಿ, ಉಡಿದಾರ, ಕಾಲಿನ ಪೆಂಡೆ ಮುಂತಾದ ಆಭರಣಗಳಿಂದಲೂ, ಚಕ್ರ, ಶಂಖ, ಖಡ್ಗ, ಗದೆ ಮತ್ತು ಶ್ರೇಷ್ಠವಾದ ಶಾರ್ಙ್ಗ ಧನುಸ್ಸು ಎಂಬ ಐದು ಆಯುಧಗಳಿಂದಲೂ, ಪ್ರಕಾಶಮಾನವಾದ ತುಳಸೀದಳಗಳುಳ್ಳ ವನಮಾಲೆಯಿಂದಲೂ ನೀನು ಜಾಜ್ವಲ್ಯಮಾನವಾಗಿದ್ದೀಯೆ

ವಿವರಣೆ ಆಚಾರ್ಯರು ಈ ಶ್ಲೋಕದಲ್ಲಿ ಭಗವಂತನ ದಿವ್ಯಾಭರಣಗಳ ವರ್ಣನೆ ಮಾಡಿದ್ದಾರೆ ಭಗವಂತನಿಗೆ ಸಂಬಂಧಪಟ್ಟ ದಿವ್ಯದೇಹದ ಅವಯವಗಳೆಲ್ಲವೂ ದಿವ್ಯವಲ್ಲದೆ ಇರಲಾರವು. ಈ ಸಂಬಂಧ ಕಳೆದುಕೊಂಡರೆ ಇವುಗಳ ಯಾವ ಪ್ರಯೋಜನಕ್ಕೂ ಬರುವುದಿಲ್ಲ ಈ ಭಾವವನ್ನು ಸ್ಫುರತ್ ಎಂಬ ಪದ ತೋರಿಸುತ್ತದೆ ಕಿರೀಟವು ಅವನ ತಲೆಯ ಮೇಲಿದ್ದರೂ ಅವನ ಅಧೀನ ಆಕಾರಣ ಅವುಗಳಿಂದ ಭಗವಂತನ ಆತ್ಮವೈಭವಕ್ಕೆ ಎಳ್ಳಷ್ಟೂ ಪ್ರಯೋಜನವಿಲ್ಲ ಆದರೆ ಅವನ ಸಂಬಂಧದಿಂದ ಅವುಗಳ ಹಿರಿಮೆ ವರ್ಣನಾತೀತ ಇದು ಲೋಕ ನ್ಯಾಯವಿರುದ್ಧ ಇದಕ್ಕೆ ಕಾರಣ ಅಜ್ಞಾನವೆಂಬ ತಮಸ್ಸು ಚೇತನನ ಮನಸ್ಸನ್ನು ಆವರಿಸಿಕೊಂಡಿರುವುದು ಅಂಗದ - ತೋಳು, ತೋಳ್ಬಳೆ, ಶರೀರಧರ್ಮ ಬಾಹುಬಲ ಹಾರವೆಂದರೆ ಕಂಠದಲ್ಲಿ ಚೇತನ ವರ್ಗಗಳನ್ನು ಸರವಾಗಿ ಮಾಡಿಕೊಂಡಿರುತ್ತಾನೆ ಈಶ್ವರನ ಸಂಪರ್ಕದಿಂದ ಚೇತನನಿಗೆ ಭೋಗಭಾಗ್ಯ ಕಂಠಿಕಾ ಎಂದರೆ ಕಂಠೀಹಾರ ಕತ್ತಿನ ಸುತ್ತಲೂ ಬಳೆಯಂತಿದೆ ಮಣೀಂದ್ರ - ಅದ್ಭುತ ರತ್ನಗಳನ್ನು ದೇಹದಲ್ಲಿ ಧಾರಣೆಗೆ ಬಳಸಲಾಗಿದೆ ಕಾಂಚೀಗುಣ - ಉಡಿದಾರ ನೂಪುರ - ಗೆಜ್ಜೆ, ಕಾಲಂದಿಗೆ ಈ ಆಭರಣಗಳು ಭಗವಂತನಂತೆಯೇ ಅನಂತ ರಥಾಂಗ ಶಂಕಾಸಿ - ಇವು ಆಭರಣವಾಗಿಯೂ, ಸಂಗ್ರಾಮ ಸಮಯದಲ್ಲಿ ವೈಪರೀತ್ಯವನ್ನು ಅಡಗಿಸುವ ಸಾಧನಗಳಾಗಿರುವ ಆಯುಧ ವಿಶೇಷಗಳು - ರಥಾಂಗ - ಚಕ್ರ, ಶಂಖ - ಬಲಮುರಿ ಶಂಖ ಶತ್ರುಗಳಿಗೆ ಸಿಡಿಲು ಬಡಿದಂತಾಗುತ್ತದೆ. ಇತರ ವೇಳೆಗಳಲ್ಲಿ ಮಂಗಳಘೋಷ ಅಸಿ - ಕತ್ತಿ - ಇದು ಜ್ಞಾನ, ಅಜ್ಞಾನವನ್ನು ವಿವೇಚಿಸುವ ಸಾಮಗ್ರಿ. ಗದಾ - ಇದರ ಮುಂದೆ ಯಾವುವೂ ನಿಲ್ಲಲಾರವು. ಧನುಃ - ಬಿಲ್ಲು ಮತ್ತು ಕೋದಂಡ ಇವುಗಳಿಂದ ಲಸತ್ - ಭೀಕರವಾದರೂ ಆಕರ್ಷಕನಾಗಿರುತ್ತಾನೆ ತುಲಸ್ಯ - ಕೋಮಲವಾದ, ಸುಂದರರೂಪುಳ್ಳ, ಆಕರ್ಷಕ ಸುಗಂಧವುಳ್ಳ ತುಳಸೀಮಾಲೆಯನ್ನೂ ಧರಿಸಿದ್ದಾನೆ ವನಮಾಲಯಾ - ಕಾಡು ಹೂಗಳ ಸೊಗಸಾದ ಹೂವಿನ ಮಾಲೆ. ಉಜ್ವಲಂ - ಭಗವಂತನು ಸದಾ ಪ್ರಕಾಶಮಾನವಾಗಿರುವವನು ಇವುಗಳ ಸಂಗದಿಂದ ಉಜ್ವಲನಾಗುತ್ತಾನೆ ಅಂದರೆ ಅವುಗಳಿಂದ ಅವನಿಗೆ ಮಿರುಗಿಲ್ಲ ಅವನ ಸಹವಾಸದಿಂದ ಅವುಗಳಿಗೆ ಮಿರುಗು ಏರ್ಪಟ್ಟು ಅವುಗಳ ವೈಭವ ಅಂದರೆ ಸಂಬಂಧದಿಂದ ಏರ್ಪಟ್ಟ ಸೌಭಾಗ್ಯ ಪ್ರಕಾಶವಾಗುತ್ತದೆ ದೇವರನ್ನು ಅರ್ಚಾರೂಪದಲ್ಲಿ ಸಂದರ್ಶಿಸುವಾಗ ಅವನು ಧರಿಸಿರುವ ನಾನಾವಿಧವಾದ ಆಭರಣಗಳು ಮತ್ತು ಆಯುಧಗಳು ಭೀಷಣ ಮತ್ತು ರಮಣೀಯ ಆಕಾರ ಪಡೆಯುತ್ತವೆ ಭಕ್ತರಿಗೆ ರಮಣೀಯ, ಶತ್ರುಗಳಿಗೆ ಭೀಷಣ 'ಸಂಬಂಧದಿಂದ ಇವೆಲ್ಲ ಚೇತನರು ಭಗವಂತನಿಗೆ ಆಭರಣವಾಗುತ್ತಾರೆ ಈ ಪ್ರಪಂಚದಲ್ಲಿ ಸುರಾಸುರ ವಿಭಾಗವು ಈಶ್ವರನ ಎರಡು ಅಂಶಗಳನ್ನು ತೋರಿಸುತ್ತದೆ ಒಂದು ಅನುಕರಣೆ ಮತ್ತು ಅದರ ಫಲಿತಾಂಶ, ಮತ್ತೊಂದು ಅವಲಂಬನೆ ಮತ್ತು ಅದರ ಪ್ರಭಾವ - ಇದೇ ದೇವಾಸುರ ವಿಭಾಗ



ಪರಮಾತ್ಮನು ಏಕಮಾತ್ರನಾದರೂ ಚೇತನ, ಅಚೇತನ ವಿಶಿಷ್ಟನಾಗಿ ಅವುಗಳಿಗೆ ಆತ್ಮನಾಗಿ ಉಳಿದುಕೊಂಡು ತನ್ನ ಸಂಬಂಧದಿಂದ ಅವುಗಳನ್ನು ಪರಮ ಪವಿತ್ರವಾದ ಸನ್ನಿವೇಶದಲ್ಲಿ ಉಳಿಸಿಕೊಳ್ಳುತ್ತಾನೆಂಬುದು ಭಗವಂತನ ದಿವ್ಯಮಂಗಳ ವಿಗ್ರಹ ಅದರಲ್ಲಿ ಕಂಡುಬರುವ ಅವಯವಗಳೊಡನಿರುವ ಆಭರಣಗಳು - ಎಲ್ಲವೂ ಏಕ ರೀತಿಯಲ್ಲಿ ದಿವ್ಯತ್ವ ಹೊಂದುತ್ತವೆ ತತ್ವತ್ರಯ ಆಕಾರದಲ್ಲಿ ದಿವ್ಯ ಅಂತ್ಯದಲ್ಲೂ ದಿವ್ಯ, ಮಧ್ಯೆ ಸಂಸಾರ ಸಂಬಂಧ ನಿಮಿತ್ತ ಜ್ಞಾನತಪ್ಪಿರುವುದು ಹೇಯ ಎಂಬ ಭಾವ ಏರ್ಪಡುತ್ತದೆ

ಚಕರ್ಥ ಯಸ್ಯಾ ಭವನಂ ಭುಜಾಂತರಂ
ತವ ಪ್ರಿಯಂ ಧಾಮ ಯದೀಯ ಜನ್ಮಭೂಃ
ಜಗತ್ ಸಮಸ್ತಂ ಯದಪಾಂಗ ಸಂಶ್ರಯಂ
ಯದರ್ಥಮಂಭೋಧಿಃ ಅಮಂಥಿ ಅಬಂಧಿಚ

|| ೩೭ ||

ಯಾವ ಲಕ್ಷ್ಮಿಗೆ ನಿನ್ನ ವಕ್ಷಸ್ಥಲವನ್ನೇ ವಾಸಭವನವನ್ನಾಗಿ ಮಾಡಿದ್ದೀಯೋ, ನಿನಗೆ ಪ್ರಿಯಸ್ಥಾನವಾದ ಕ್ಷೀರಸಮುದ್ರವು ಯಾವ ಲಕ್ಷ್ಮಿಗೆ ಜನ್ಮಸ್ಥಾನವಾಗಿದೆಯೋ, ಸಮಸ್ತ ಚರಾಚರ ಜಗತ್ತೂ ಯಾವ ಲಕ್ಷ್ಮಿಯ ಕಟಾಕ್ಷವನ್ನು ಆಶ್ರಯಿಸಿ ನಿಂತಿದೆಯೋ, ಯಾವ ಲಕ್ಷ್ಮಿಯ ಪ್ರಾಪ್ತಿಗಾಗಿ ಕ್ಷೀರ ಸಮುದ್ರವು ಕಡೆಯಲ್ಪಟ್ಟಿತೋ ಮತ್ತು ಲವಣ ಸಮುದ್ರದಮೇಲೆ ಸೇತುವೆಯು ಕಟ್ಟಲ್ಪಟ್ಟಿತೋ

ವಿವರಣೆ ಚಕರ್ಥ.. ಲಕ್ಷ್ಮೀದೇವಿಗೆ ಆದಿಯಲ್ಲಿ ಕಮಲವು ವಾಸಸ್ಥಾನವಾಗಿತ್ತು ಅದಕ್ಕಿಂತ ಮಿಗಿಲಾದ ಅನುಕೂಲಾಶ್ರಯ ಮತ್ತಾವುದೂ ಇಲ್ಲ ಅದನ್ನು ಆಶ್ರಯಿಸಿ ತನ್ನ ಸರ್ವ ಸೌಭಾಗ್ಯಕ್ಕೆ ಅತ್ಯಂತ ಅನುಕೂಲವಾದ ಕಮಲವನ್ನು ನಿತ್ಯನಿಲಯವನ್ನಾಗಿ ಅಂಗೀಕರಿಸಿದಳು ಇದು ಅವಳ ಸೌಕುಮಾರ್ಯಕ್ಕೆ ಅನುಗುಣವಾದ ಆಶ್ರಯ ಕ್ಷೀರಾಬ್ಧಿಮಥನ ಸಂದರ್ಭದಲ್ಲಿ ವ್ಯಕ್ತವಾದ ಅಂಶಗಳನ್ನು ದೇವಾಸುರರಿಗೆ ಸ್ಪರ್ಧೆ ಏರ್ಪಟ್ಟಾಗ ಮರಣ ನಿವರ್ತಕವಾದ ಮತ್ತು ಜೀವನದಲ್ಲಿ ಅತ್ಯಂತ ಸುಖಪ್ರಾಪ್ತಿಗೂ ಯೋಗ್ಯವಾದ ಆಹಾರವನ್ನು ವಿಷ್ಣುವಿನಲ್ಲಿ ದೇಡಿದಳು ಅಂತೆಯೇ ವಿಷ್ಣುವು ಕ್ಷೀರಾಬ್ಧಿಯನ್ನು ಮಥಿಸಿ ಅದರಲ್ಲಿ ಬಂದದ್ದನ್ನು ಅವಳು ಆರಿಸಿಕೊಳ್ಳಬಹುದೆಂದು ಅವರ ಪಾಲಿಗೆ ಬಿಟ್ಟನು ಒಡ್ಡೊಬ್ಬರೂ ತಮಗೆ ಇಷ್ಟವಾದುದನ್ನು ತೆಗೆದುಕೊಂಡರು ಕೊನೆಗೆ ತೋರಿದ ಪದಾರ್ಥ ಸಮುದ್ರದಿಂದ ಹೊರಬಿದ್ದ ಅದ್ಭುತ ಮ ಯವಾದ ಸ್ತ್ರೀವ್ಯಕ್ತಿ ಅವಳು ತಾನಾಗಿಯೇ ಸರ್ವಸಾಕ್ಷಿಕರವಾಗಿ ಸರ್ವೇಶ್ವರನ ಎದೆಯನ್ನು ಅಪ್ಪಿಕೊಂಡಳು ಶ್ರಯತೇ ಸ್ವಯಂ - ಶ್ರೀ - ತಾನಾಗಿ ಅಪ್ಪಿಕೊಳ್ಳಲು ನೆರವಾದ ಸ್ಥಳ ಎಂಬುದು ಏರ್ಪಟ್ಟಿತು ಇದರಿಂದ ಪರಮಾತ್ಮನನ್ನು ವರ್ಣಿಸುವಾಗ ಶ್ರೀದೇವಿಗೂ ಆಶ್ರಯನಾದವನು ನಾರಾಯಣನಲ್ಲದೆ ಮತ್ತೊಬ್ಬನಲ್ಲ ಎಂದು ವಿಷ್ಣುಪತ್ನಿ ಎಂಬುದಾಗಿ ಅವಳಿಗೂ, ಶ್ರಿಯಃಪತಿ ಎಂದು ನಾರಾಯಣನಿಗೂ ಸಂಬಂಧ ಪೂರ್ವಕವಾಗಿ ಹಿರಿಮೆ ತೋರಿಸಿಕೊಟ್ಟಳು ಸ್ವತಃ ಆಕರ್ಷಕನಾದ ಪರಮಾತ್ಮನನ್ನು ವರಿಸಿದ ಭಾಗ್ಯ ಶ್ರೀದೇವಿಗೆ, ಅವಳಿಗೂ ಆತ್ಮನಾದುದರಿಂದ, ಹಿರಿಮೆಯು ಈಶ್ವರ ಸಂಬಂಧದಿಂದ ಎಂಬುದು ವ್ಯಕ್ತವಾಗುತ್ತದೆ ಇದೇ ತದೀಯತ್ವಭಾವನೆ ತದೀಯತ್ವವು ಸಂಗದ ಹಿರಿಮೆ

ಶ್ರೀದೇವಿಗೆ ಅವನು ಲಕ್ಷ್ಮೀಪತಿಯಾದುದರಿಂದ ಅವಳ ಉಳಿಕೆಗೆ ಪತಿಸಂಪರ್ಕ ಅಪೇಕ್ಷಿತ ಮತ್ತು ವಿಷ್ಣುಪತ್ನಿ ಎಂದು ಆಶ್ರಯಭೂತ ವ್ಯಕ್ತಿ ಸರ್ವವಿಧ ಬಂಧುವಾದುದರಿಂದ ಇವಳಿಗೆ ಶ್ರೀ ಸ್ವಭಾವ ಸರ್ವಥಾ ಪೂರ್ಣವಾಗಿ ಉಳಿದುಕೊಂಡಿತು ಬ್ರಹ್ಮಾದಿಗಳಿಗೆ ಶ್ರೀದೇವಿಯಂತೆ ತಮ್ಮ ನಿಲುವನ್ನು ಪಡೆಯದೇಕೆಂಬ ಬಯಕೆ ಸ್ವಾರ್ಥ ವೃತ್ತಿ ಲೌಕಿಕ ಪರಾರ್ಥವೃತ್ತಿ ವೈದಿಕ ಇದನ್ನು ನೆರವೇರಿಸಿಕೊಡುವವನು ಪರಮಾತ್ಮ ಆ ಬಗೆಯನ್ನು ಅವನು ತನ್ನ ರಕ್ಷಾರೂಪವಾದ ವ್ಯಾಪಾರದಲ್ಲಿ ಎಲ್ಲವನ್ನೂ ಒದಗಿಸುತ್ತಾನೆ ಚೇತನನು ಜ್ಞಾನರೂಪಿಯಾದ್ದರಿಂದ ಅವನ ಇಷ್ಟಕ್ಕೂ ಅವಕಾಶಕೊಟ್ಟು ಅವನ ತಲೆಯಮೇಲೆ ಜವಾಬ್ದಾರಿ ಇಟ್ಟು ತಾನು ಕೇವಲ ಉಪಕಾರಿ ಆಗುತ್ತಾನೆ ಚೇತನನು ಸಾಧುಮಾರ್ಗವನ್ನು ಅವಲಂಬಿಸಿದರೆ ಅವನಿಗೆ ಸದ್ಗತಿ ಅಂದರೆ ಸತ್ ಶಬ್ದ ವಾಚ್ಯನಾದ ಪರಮಾತ್ಮ ಪ್ರಾಪ್ಯ ಗತಿ ಎಂಬುದು ಅನುಷ್ಠಾನವಾದರೆ ಸತ್ ಪದಾರ್ಥವಾದ ಪರಮಾತ್ಮನಿಗೆ ಪ್ರಿಯವಾದ ಮಾರ್ಗ ಇದರಲ್ಲಿ ಹೊಣೆ ಜೀವಾತ್ಮನದು ಆದರೆ ಈಶ್ವರನ ಸರ್ವೇಶ್ವರತ್ವಕ್ಕೆ ಎಡೆಯಿಲ್ಲ ಅದೆಲ್ಲವನ್ನೂ ನಡೆಸುವವನು ಅಂತರ್ಯಾಮಿಯಾದ ಈಶ್ವರ ಈ ಕ್ರಮ ಕಾರ್ಯ ಗತವಾಗದೇಕಾದರೆ ಜೀವೇಶ್ವರಸಂಗ ನಿತ್ಯವಾಗಿರದೇಕು ಈ ಸಂಗವು ಪಾರತಂತ್ರ್ಯ ಶರೀರಾತ್ಮರೂಪ ಸಂಬಂಧದಲ್ಲಿ ಮಾತ್ರ ಸ್ಫುಟವಾಗಿ ತೋರುತ್ತದೆ ಪೃಥಕ್ ತತ್ವಕ್ಕೆ ಎಣೆಗೊಳ್ಳದ ಸಂಗ ಚೇತನನ ಪಾಲಿಗೆ ಸೇರಿದ್ದು

ತನ್ನ ಭುವನಗಳ ಮಧ್ಯೆ ಎದೆಯಲ್ಲಿ ವಾಸಸ್ಥಾನಕಲ್ಪಿಸಿಕೊಟ್ಟು ಲಕ್ಷ್ಮೀದೇವಿಯು ಕೇವಲ ಕಮಲವಾಸಿನಿಯಲ್ಲದೆ ಈಶ್ವರನ ಹೃದಯ ಕಮಲವಾಸಿನಿಯಾದಳು ಇದರಿಂದ ಶ್ರೀದೇವಿಗೂ ಆಶ್ರಯ ನೀಡಿ ಆಕೆಯು ತನ್ನ ಅನುಷ್ಠಾನವನ್ನು ಸಾರ್ಥಕವಾಗಿ ಕೈಗೊಳ್ಳುವಂತೆ ಮಾಡಿದ ಮಹೋಪಕಾರಿ ನಾರಾಯಣ ಅವಳು ಅವನ ಎದೆಯನ್ನು ಕ್ಷಣಮಾತ್ರವೂ ಬಿಟ್ಟಿರಲಾರಳು ಶ್ರೀಮತ್ ಎಂಬ ಪದದಲ್ಲಿ ತೋರುವ ನಿತ್ಯಯೋಗ್ಯ ಅಪೃಥಕ್ ಸ್ಥಿತಿ ಆದ್ದರಿಂದ ನಾರಾಯಣನಿಗೆ ಶ್ರೀಮತ್ವ ಆದಿತಮವಾದ ಲಕ್ಷಣ

ತವಪ್ರಿಯಂ ಪರ

ಮಾತ್ಮನು ವೈಕುಂಠವಾಸಿ ಪಂಚಭೂತಗಳಲ್ಲಿ ಒಂದು ಜಲಾಂಶ. ಅಂದರೆ ಸಾಗರ ಒಂದು ಆದರೂ ಕ್ಷೀರಾಬ್ಧಿಯಲ್ಲಿ ನಿತ್ಯವಾಸವನ್ನು ಅಂಗೀಕರಿಸಿ ಅಲ್ಲಿಯೇ ತನ್ನ ಕಾಲವನ್ನೆಲ್ಲಾ ಲೋಕ ಸಂರಕ್ಷಣೆಗಾಗಿ ಕಳೆಯುವ ಸನ್ನಿವೇಶ ಏರ್ಪಟ್ಟಿತು ಈ ಸಾಗರವನ್ನು ಈಶ್ವರನು ಚುನಾಯಿಸಲು ಕಾರಣ ಕ್ಷೀರಸಾಗರ ಕನ್ನಿಕೆಯಾದ ಶ್ರೀದೇವಿಯ ವಾಸಸ್ಥಾನವೆಂಬುದೇ ಸ್ವಶುರಗೃಹನಿವಾಸ "ಯಥಾ ನರಾಣಾಂ ಕಥಾ ಅಯನಸ್ಯಾದಿ" - ಮಾವನ ಮನೆಯಲ್ಲಿ ಭೋಗಾಂಶವೇ ವಿನಾ ಕರ್ತವ್ಯಾಂಶಕ್ಕೆ ಅವಸರವಿಲ್ಲ ಆದ್ದರಿಂದ ಭೋಗದೃಷ್ಟಿಯಿಂದ ತನ್ನ ಗೋತ್ರವನ್ನು ಅಸಡ್ಡೆಮಾಡಿ ಸ್ವಶುರ ಗೋತ್ರ ಬಯಸುತ್ತಾನೆ ತತ್ಕಾರಣ ಪರಮಪದ ಬಿಟ್ಟರೆ ಅದು ಪರಮಾತ್ಮನ ತೌರುಮನೆ ಅವನನ್ನೇ ಕಾಣಬಲ್ಲ ಸ್ಥಳ ಮಾವನಮನೆ - ಕ್ಷೀರಾಬ್ಧಿ ಶ್ರೀ ಮಹಾವಿಷ್ಣು ಕ್ಷೀರಾಬ್ಧಿಶಾಯಿ ತಾನು ಸರ್ವೇಶ್ವರನಾದುದರಿಂದ ಅಲ್ಲಿದ್ದುಕೊಂಡೇ ದೇಡುವವರ ದೇಡಿಕೆಯನ್ನು, ಸತಿಯನ್ನು ಬಿಡದೆ ರಕ್ಷಿಸುತ್ತಾನೆ ಅವಳು ಪುರುಷಕಾರಳು ಮಾತ್ರ. ಲಕ್ಷ್ಮಿಯ ವಿಷಯದಲ್ಲಿ ತಾನು ವರ್ತಿಸಿದಂತೆ ಇತರರಲ್ಲೂ ವರ್ತಿಸುವುದಾಗಿ ತೋರಿಸಲು ಲಕ್ಷ್ಮೀದೇವಿಯನ್ನು ಮುಂದಿಟ್ಟುಕೊಂಡಿದ್ದಾನೆ ಆದ್ದರಿಂದ ನಾರಾಯಣನು ಲಕ್ಷ್ಮಿಗೆ ಅಯನವಾಗಿದ್ದರೂ ಚೇತನ ವರ್ಗಕ್ಕೆ ಶ್ರಿಯಃ ಪತಿಯಾಗಿದ್ದಾನೆ ಈಶ್ವರನ ಪ್ರವರ್ತನೆಯ ಫಲವಾದ ಶ್ರೀದೇವಿ ಇತರ ಚೇತನರಿಗೆ ಮಾರ್ಗದರ್ಶಿನಿಯೂ ಭಾಗ್ಯಪ್ರಾಪ್ತಿಕೆಯೂ

ಆಗುತ್ತಾಳೆ ತತ್ಕಾರಣ ಜನರೆಲ್ಲರೂ ಕ್ಷೀರಾಬ್ಧಿನಾಥನಲ್ಲಿ ಮೊರೆಯಿಡುವರು ಇದು ಉಭಯ ವೇದಾಂತ ಸಂಬಂಧವಾದ ತತ್ತ್ವ 'ದೇವಾನಾಂ ದಾನವಾನಾಂ ಚ ಸಾಮಾನ್ಯ ಮಧಿದೈ ವತಂ' ಎಂಬ ವಾಕ್ಯದಲ್ಲಿ ವ್ಯಕ್ತವಾಗುತ್ತದೆ.

ಯಾದರ್ಥಂ ಅಂಥೋಧಿಃ ಅಮಂಥಿ ಅಬಂಧಿ ಚ - ಭಗವಂತನು ಕ್ಷೀರಸಾಗರವನ್ನು ಕಡೆದನು ಈ ಕಾರ್ಯಕ್ಕೆ ಮುಖ್ಯಗುರಿ ತನ್ನ ಕೈಬಿಟ್ಟು ಹೋದ ಪದಾರ್ಥದ ಪುನರ್ಯೋಗಕ್ಕಾಗಿ ಇದು ಸ್ವಾಭಾವಿಕ ರಕ್ಷಕತ್ವವನ್ನು ಉಳಿಸಿಕೊಳ್ಳಲು ಕೈಗೊಳ್ಳುವ ಪ್ರಯತ್ನ ಇದೇ ಪರ ದುಃಖ ಅಸಹಿಷ್ಣುತ್ವ ಭಗವಂತನೇ ಸರ್ವಥಾ, ಸರ್ವದಾ, ಸರ್ವತ್ರ, ಸರ್ವೇಷಾಂ ಈಶ್ವರಃ ಎಂಬ ಶಬ್ದಕ್ಕೆ ಇದು ನಿಮಿತ್ತವಾದುದು

ಸ್ವೈಶ್ವರೂಪ್ಯೇಣ
ಸದಾ ಅನುಭೂತಯಾ
ಅಪಿ ಅಪೂರ್ವವತ್
ವಿಸ್ಮಯಮ್ ಆದಧನಯಾ
ಗುಣೇನ ರೂಪೇಣ
ವಿಲಾಸ ಚೇಷ್ಟಿತೈಃ
ಸದಾ ತವೈವ ಉಚಿತಯಾ
ತವ ಶ್ರಿಯಾ || ೩೮ ||

ಯಾವ ಲಕ್ಷ್ಮಿಯು ಸದಾ ಅನುಭವಿಸಲ್ಪಡುತ್ತಿದ್ದರೂ ಸ್ವೀಯವಾದ ವಿಶ್ವರೂಪವುಳ್ಳವಳಾದುದರಿಂದ ಹಿಂದೆಂದೂ ಕಾಣಿಸದಿದ್ದವಳಂತೆ ವಿಸ್ಮಯವುಂಟು ಮಾಡುತ್ತಿರುವಳೋ, ಜ್ಞಾನ ಕಾರುಣ್ಯಾದಿ ಗುಣಗಳಿಂದಲೂ, ದಿವ್ಯಮಂಗಳ ವಿಗ್ರಹದಿಂದಲೂ, ಲೀಲಾವಿಶೇಷದಿಂದಲೂ, ಆಶ್ರಿತರ ರಕ್ಷಣೆಗಾಗಿ ಅವತರಿಸುವಿಕೆಯಿಂದಲೂ, ಯಾವಾಗಲೂ ನಿನಗೇ ಯೋಗ್ಯಳಾಗಿ ಎಂದೆಂದಿಗೂ ನಿನ್ನಿಂದ ಅಗಲದಿರುವ ಸಂಪತ್ತಾಗಿಯೂ ಇರುವಳು

ವಿವರಣೆ ಈ ಶ್ಲೋಕದಲ್ಲಿ ಆಚಾರ್ಯರು ಶ್ರೀಯೋಗದ ಅತಿಶಯವನ್ನು ಪ್ರಕಾಶಪಡಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಶ್ರೀದೇವಿಯ ಪತಿಪಾರಾರ್ಥ್ಯವನ್ನು ಸರ್ವವಿಧದಲ್ಲೂ ಪ್ರಕಾಶಪಡಿಸಿ ಅವನ ಭೋಗಕ್ಕೆ ಉಪಕರಣವಾಗಿದ್ದರೂ, ಅವನ ಸ್ವರೂಪಕ್ಕೆ ಅನುಗುಣವಾದ ವರ್ತನೆಯನ್ನು ಬಿಡದಿರುವುದರಿಂದ ಅವನ ಹೃದಯದಲ್ಲಿ ಅವನ ಶ್ರೀ ಮತ್ತು ತನಗೇ ಶ್ರೀ ಎಂಬ ಭಾವನೆಯನ್ನು ಪ್ರಕಟಪಡಿಸುತ್ತಾ ಚೇತನನಿಗೆ ಆದರ್ಶಭೂತವಾದ ಸ್ವರೂಪವಿಜ್ಞಾನ ಮತ್ತು ಪುರುಷಾರ್ಥ ಸಾಧನೆಯನ್ನು ಪ್ರಕಾಶಪಡಿಸಲಾಗಿದೆ ಈಶ್ವರನ ವಿಷಯದಲ್ಲಿ ಚೇತನನು ಸರ್ವವಿಧವಾದ ಪಾರತಂತ್ರ್ಯವನ್ನು ತನ್ನಲ್ಲಿ ಅರಿತುಕೊಳ್ಳುವುದು ಸೂಕ್ಷ್ಮವಾಗಿ ನಾವು ಚಿಂತನೆಯಲ್ಲಿ ಉಳಿಸಿಕೊಳ್ಳಬೇಕಾದ ಭಾವನೆ ಆದ್ದರಿಂದ ಅವನ ಬಳಕೆಗೆ ಉಂಟಾದ ಪದಾರ್ಥವೆಂಬ ಭಾವನೆಯೊಡನೆ ಅವನ ಭೋಗಕ್ಕೆ ಮಾತ್ರ ತನ್ನನ್ನು ಬಳಸಿಕೊಳ್ಳುವುದು ವಿಶಿಷ್ಟಾದ್ವೈತದಲ್ಲಿ ಈಶ್ವರನ ಶರೀರ ಭೂತ ಮತ್ತು ಅಚೇತನವಲ್ಲದ ಜ್ಞಾನ ಸ್ವರೂಪಿಯಾದ ದ್ರವ್ಯಸ್ವರೂಪ, ವರ್ತನೆ ಮತ್ತು ಪುರುಷಾರ್ಥ ಇದನ್ನು ಶ್ರೀದೇವಿಯ ವಿಷಯದಲ್ಲಿ ಕಾಣಿಸುತ್ತಾರೆ ಅವಳ ಸಂಗದಿಂದ ಪ್ರಪ್ರಥಮವಾಗಿ ಶರೀರಾತ್ಮಭಾವ, ಈಶ್ವರನಿಗೆ ಭೋಗ್ಯವಾಗಿರುವಿಕೆ ಎಂಬ ಭಾವದ್ವಯ ಸ್ಪಷ್ಟ. ಶ್ರೀದೇವಿಯ ನಡತೆ ಸಮಸ್ತ ಚೇತನ ಪದಾರ್ಥಗಳಿಗೆ ಆದರ್ಶ ಇದರ ಪ್ರಕಟನೆ ಅನುಭವಪೂರ್ವಕವಾದ ಉಪದೇಶ. ಇದಕ್ಕನುಗುಣವಾಗಿ ಚೇತನನು ನಡೆದುಕೊಳ್ಳಬೇಕು ಇದನ್ನು ಅಯೋಗವ್ಯವಚ್ಛೇದ ಎನ್ನಲಾಗಿದೆ. ಅಯೋಗವೆಂದರೆ ಸಂಬಂಧಜ್ಞಾನವಿಲ್ಲದಿರುವಿಕೆ ಅದರ ಅರಿವು ವ್ಯವಚ್ಛೇದ. ಇದು ಶಾಶ್ವತ ಸಂಬಂಧವಾದುದರಿಂದ ಸಂಬಂಧ ಕಡಿದರೆ ಪುರುಷಾರ್ಥಹಾನಿ ಮತ್ತು ಸ್ವರೂಪಹಾನಿ ಏರ್ಪಡುತ್ತದೆ.

ಚೇತನನು ಪರಮಾತ್ಮನಿಗೆ ಸರ್ವವಿಧದಲ್ಲೂ ಪಾರತಂತ್ರ್ಯವಹಿಸಿ, ಅವನ ವಿನಿಯೋಗಕ್ಕೆ ಲೇಶವೂ ಅಡ್ಡಿಯಾಗದಿರಬೇಕೆಂಬ ಬಯಕೆ ಅಂದರೆ ಅಚೇತನನಿಗೆ ಆತ್ಮನಾಗಿದವ ಭಾವದಂತೆ ಭಾವವನ್ನು ಉಳಿಸಿಕೊಳ್ಳುವುದು ಹೋಗಬೇಕು ಸ್ವಂ ಎಂಬ ಪೃಥಕ್ ಭಾವ, ಜ್ಞಾನ ಎಂಬ ಸಾದೃಶ್ಯ ಭಾವಗಳನ್ನು ತೊಡೆದುಹಾಕಿ ಏಕೈಕ ಜಗದಾತ್ಮನಾದ ಪರಮಾತ್ಮನಾದ ಪರಮಾತ್ಮನಲ್ಲಿ ಜ್ಞಾನದ್ರವ್ಯವಾದ ಪ್ರಕೃತಿಯಾಗಿ ಉಳಿದುಕೊಳ್ಳಬೇಕು ಆಗ ಸ್ವಾರ್ಥಾಂಶ ಪೂರ್ಣವಾಗಿ ತೊಲಗುತ್ತದೆ. ಸ್ವರೂಪ, ಸ್ವಭಾವ, ವ್ಯಾಪಾರ ಪ್ರಯೋಜನಗಳು ಈಶ್ವರಾಧೀನವಾಗಿ ಅವನ ಪ್ರಯೋಜನವಾಗಿರುತ್ತದೆ. ಅಂದರೆ ಜ್ಞಾನಾನಂದಮಯತ್ವ ಏರ್ಪಡುವುದು ಇದು ಶ್ರೀಗೆ ಭಗವಂತನಲ್ಲಿ ಏರ್ಪಟ್ಟ ಸಂತೃಪ್ತಿ ಇದು ಅನುಭವದ ಪರಾಕಾಷ್ಠೆ.

ಸ್ವೈಶ್ವರೂಪ್ಯೇಣ ಸದಾ - ಭಗವಂತನು ತನ್ನ ವಿಶ್ವರೂಪವನ್ನು ಬಳಸಿಕೊಳ್ಳುವುದು ಅಂದರೆ ಸರ್ವಾವಯ ಬಳಸಿಕೊಂಡು ಬಿಡುವಿಲ್ಲದೆ ನಿರಂತರವಾಗಿ ಶ್ರೀದೇವಿಯನ್ನು ಅನುಭವಿಸುತ್ತಿದ್ದರೂ, ಪ್ರತಿಕ್ಷಣವೂ ಒಂದೇ ರೀತಿಯ ಅನುಭವವಾದರೂ, ನವನವತೆಯ ಉನ್ಮೇಷಣೆಗೆ ದಾರಿ ಮಾಡಿಕೊಟ್ಟು ಇದರ ಪ್ರಕಾರ ಅವನಿಗೆ ಗುಣವಾಗಿದ್ದು ಅವನ ಭೋಗ್ಯಕ್ಕೆ ಅನುಗುಣವಾದ ಗುಣಗಳನ್ನು ಬೆಳೆಸಿಕೊಂಡು ತಕ್ಕ ಶರೀರ ಹೊಂದಿ, ಈ ಮೂಲಕವಾದ ಕಾಲವಿಚ್ಛೇದವಿಲ್ಲದೆ ಭಗವದನುಭವಕ್ಕೆ ತುತ್ತಾಗಿದ್ದರೂ, ಅವನ ಭೋಗಕ್ಕಾಗಿ ಬೇಕಾದ ಅರ್ಹತೆ ಉಳ್ಳವಳಾಗಿ ಅದರಲ್ಲಿ ತನಗೆ ಪಾಲನ್ನು ಬಯಸದೆ, ಅವನಿಗಾಗಿಯೇ ಮೀಸಲಾಗಿರುವುದರಿಂದ, ಅವನ ಭೋಗಸಾಧನವಾಗಿ ಸರ್ವವಿಧದಲ್ಲೂ ಇದ್ದುಕೊಂಡು, ಆ ಕಾರಣದಿಂದಲೇ ಶ್ರೀ ಎಂಬ ನಾಮಧೇಯ ಪಡೆದಿರುವಳು ಸರ್ವವಿಧದಲ್ಲೂ ಅವನಿಗೆ ಅಭಿಮತವಾದುದರಿಂದ ಅವಳ ಉಪದೇಶ ಮತ್ತು ನಡತೆಯಿಂದ ಜೀವರಾಶಿಗಳಿಗೆ ಅವಳಂತೆಯೇ ಫಲಪ್ರಾಪ್ತಿ ಏರ್ಪಡುವುದು ಅತಿಶಯವಾದ ಜೀವಾತ್ಮಸ್ವರೂಪವನ್ನು ಲಕ್ಷ್ಮೀದೇವಿಯಲ್ಲಿ ಪ್ರದರ್ಶಿಸಿ, ಅವಳನ್ನು ಬಿಡಲಾರದಿರುವ ಈಶ್ವರನ ಭಾವನೆಯು ಅವನ ಸಂರಕ್ಷಣೆಯ ಸ್ವರೂಪವಾಗಿದೆ. ಚೇತನನು ಲಕ್ಷ್ಮಿಯ ಅನುಯಾಯಿ ಆಗಿ ಬಾಳಬೇಕೆಂಬ ಬಯಕೆ ಈ ಶ್ಲೋಕದಲ್ಲಿ ಸ್ಥಿರಗೊಳ್ಳುತ್ತದೆ.

ತಯಾ ಸಹ ಆಸೀನಮ್ ಅನಂತಭೋಗಿನಿ
ಪ್ರಕೃಷ್ಟ ವಿಜ್ಞಾನ ಬಲೈಕಧಾಮನಿ
ಫಣಾಮಣಿವ್ರಾತ ಮಯೂಖ ಮಂಡಲ
ಪ್ರಕಾಶಮಾನೋದರ ದಿವ್ಯಧಾಮನಿ
|| ೩೯ ||

ಲಕ್ಷ್ಮಿಯ ಸಂಗಡ, ಅನಂತಗುಣಗಳಿಂದ ಕೂಡಿರುವುದರಿಂದಲೇ ಅನಂತನೆಂದು ಪ್ರಸಿದ್ಧನಾದ ಮಹಾಶೇಷನ ಮೇಲೆ ಕುಳಿತಿರುವೆ. ಆ ಶೇಷನಾದರೋ ಸರ್ವೋತ್ಕೃಷ್ಟವಾದ ಸರ್ವಜ್ಞತೆಗೂ ಸರ್ವಾಧಾರವಾದ ಶಕ್ತಿಗೂ ಮುಖ್ಯಾಶ್ರಯನಾಗಿ, ತನ್ನ ಹೆಡೆಗಳಲ್ಲಿರುವ ರತ್ನಗಳ ಸಮೂಹದಿಂದ ಹೊರಡುವ ಕಿರಣಗಳ ಮಂಡಲದಿಂದ ಅಪ್ರಾಕೃತವಾದ ವೈಕುಂಠಲೋಕದ ಮಧ್ಯಭಾಗವನ್ನು ಬೆಳಗುತ್ತಿದ್ದಾನೆ

ವಿವರಣೆ ಅಯನವು ಅದ್ವೈತ ಅದು ಅಯನವನ್ನು ಬಿಟ್ಟಿರಲಾರದು ಆದ್ದರಿಂದ ವಿಶಿಷ್ಟ, ನಾರಾಯಣ ಪದ ವಿಶಿಷ್ಟ ಅದ್ವೈತ ಅಂದರೆ ಕರ್ತೃತ್ವ ಭೋಕ್ತೃತ್ವಗಳೆರಡೂ ಅಯನಕ್ಕೆ ಮೀಸಲಾದ ಧರ್ಮ ನಾರದಲ್ಲಿರುವ ಚೇತನನಿಗೆ ಈ ದೃಷ್ಟಿಯಿಂದ ಏರ್ಪಡುವ ತೃಪ್ತಿ ಪುರುಷಾರ್ಥ ಭಗವಂತನಿಗೆ ರಕ್ಷಕತ್ವ, ಚೇತನನಿಗೆ ಕಿಂಕರತ್ವ ಸಾಮ್ರಾಜ್ಯ ಈ ಭಾವವನ್ನು ವಿಷ್ವಕ್ಸೇನರನ್ನು ಒಳಗೊಂಡಂತೆ ಸರ್ವರಲ್ಲೂ ಕಾಣಬಹುದು ಆದ್ದರಿಂದ ಚೇತನ ಸಾಮಾನ್ಯಕ್ಕೆ ಈ ಭಾವನೆ ಸಹಜ ಸಂಪೂರ್ಣ ಆದಿನಾಥನಿಗೆ ಆದಿ ಶೇಷ ಭೂತನಾದ ಸರ್ಪರಾಜನನ್ನು ಉದಾಹರಣೆಯಾಗಿ ಬಳಸಿದೆ ಆದ್ದರಿಂದ ಆದಿಶೇಷ ಲಕ್ಷ್ಮೀ ನಾರಾಯಣರಿಗೆ ಪ್ರಥಮ ಶೇಷಭೂತ ರಾಮಾಯಣದಲ್ಲಿ -

ಅಹಂ ಸರ್ವಂ ಕರಿಷ್ಯಾಮಿ
ಜಾಗ್ರತಃ ಸ್ವಪತಶ್ಚತೇಂ

ಇತ್ಯಾದಿ ಪ್ರಕಾಶಪಡಿಸಲಾಗಿದೆ ಕೈಂಕರ್ಯದಿಂದ ಲಕ್ಷ್ಮಣನಿಗೆ ಪುರುಷಾರ್ಥಪ್ರಾಪ್ತಿ ಶ್ರಿಯಃಪತಿಯಾದ ನಾರಾಯಣನಿಗೆ ನಿತ್ಯಭೋಗ

ಈ ಶ್ಲೋಕದಲ್ಲಿ ಶ್ರೀದೇವಿಯೊಡನೆ ವಿಶ್ಲೇಷವಿಲ್ಲದೆ ಭೋಗರಸವನ್ನು ಅನುಭವಿಸುವ ಪರಮಾತ್ಮನು ಅದಕ್ಕೆ ಅನುಕೂಲ್ಯ ಒದಗಿಸುವ ಶೇಷತ್ವ ವೃತ್ತಿಯಲ್ಲಿ ತೊಡಗಿರುವ ನಾಗರಾಜನ ಲಕ್ಷಣ ಮತ್ತು ಕ್ರಮವನ್ನು ಹೊರಗೆಡಹಲಾಗಿದೆ ಪರಮಾತ್ಮನ ಭೋಗಕ್ಕೆ ಸ್ಥಳವೇರ್ಪಡಿಸಿಕೊಟ್ಟಿರುವವಳು ಮತ್ತು ಅನಂತನೆಂಬ ಹೆಸರುಳ್ಳ ಭೋಗಿ ಸರ್ಪವೆಂಬ ನೆಪದಿಂದ ಅವಳಿಗೆ ಭೋಗಸ್ಥಾನವಾಗಿರುವುದು ವಿಜ್ಞಾನಬಲೈಕಧಾಮನಿ - ಆನಂದವು ಜ್ಞಾನದ ಅವಸ್ಥಾವಿಶೇಷ ಆದುದರಿಂದ ನಿರತಿಶಯವಾದ ವಿಜ್ಞಾನ ಬಲ ಅದನ್ನು ಕಾರ್ಯರಂಗಕ್ಕೆ ತರಲು ಬೇಕಾದ ಶಕ್ತಿ, ಈ ಎರಡಕ್ಕೂ ಏಕಧಾಮನಿ - ಪ್ರಧಾನಭೂತವಾದ ಆದಿ ಶೇಷ ಅವನು ತನ್ನ ಹೆಡೆಯಲ್ಲಿ ಧರಿಸಿರುವ ಉಜ್ವಲಮಾಲೆಯಿಂದ ಹೊರಬೀಳುವ ಕಿರಣ ಸಮೂಹದಿಂದ ಪ್ರಕಾಶಮಾನವಾದ ಉದರ ಅಥವಾ ಮಧ್ಯಪ್ರದೇಶವನ್ನು ವಾಸಸ್ಥಾನವಾಗಿ ಉಳ್ಳವನು ಲಕ್ಷ್ಮೀನಾರಾಯಣರಿಗೆ ವಿರೋಧ ರಹಿತವಾಗಿ, ವರ್ಧಕವಾದ ಭೋಗದ ಬೀಡು ಅಲ್ಲಿ ಮಡದಿಯೊಡನೆ ಬಿಡದೆ ಕುಳಿತಿರುವವನು ನಾರಾಯಣ ಸರ್ವವಿಧದಲ್ಲೂ ಅನಾದಿಯಾದುದರಿಂದ ಆದಿಶೇಷ ಇದರಿಂದ ಸರ್ಪರಾಜ ಆದಿಗೆ ಮಾತ್ರ ಶೇಷ ಇದನ್ನು ಶೇಷ ಶಾಯಿ ಎಂಬ ಪದವು ವ್ಯಕ್ತಗೊಳಿಸುತ್ತದೆ ಆದಿಶೇಷನಾದ್ದರಿಂದ ಇತರರಿಗೆ ಸೇವೆಸಲ್ಲಿಸುವುದಿಲ್ಲ

ನಿವಾಸ ಶಯ್ಯಾ ಆಸನ ಪಾದುಕಾ ಅಂಶುಕ
ಉಪಧಾನ ವರ್ಷಾತಪ ವಾರಣಾದಿಭಿಃ
ಶರೀರ ಭೇದೈಃ ತವ ಶೇಷ ತಾಂ ಗತೈಃ
ಯಥೋಚಿತಂ 'ಶೇಷ' ಇತೀರತೇ ಜನೈಃ
|| ೪೦ ||

ದಿವ್ಯವಾದ ನಿವಾಸ, ಮೆತ್ತನೆಯ ಹಾಸಿಗೆ, ಆಸನ, ಪಾದುಕೆ, ಪೀತಾಂಬರ, ದಿಂಬುಗಳು, ಮಳೆಬಿಸಿಲುಗಳನ್ನು ತಡೆಯುವ ಛತ್ರಿ ಮುಂತಾದ ರೂಪಗಳುಳ್ಳ ಮತ್ತು ಸನ್ನಿ ಶೇಷಕ್ಕೆ ತಕ್ಕಂತೆ ಭಗವಂತನ ಕೈಂಕರ್ಯವನ್ನು ಪಡೆದಿರುವ ಹಲವು ಬಗೆಯ ಶರೀರಗಳಿಂದ ಕೂಡಿರುವುದರಿಂದಲೇ ಆ ಅನಂತನು 'ಶೇಷ' ನೆಂಬುದಾಗಿ ಜನರಿಂದ ಕರೆಯಲ್ಪಡುತ್ತಿದ್ದಾನೆ

ವಿವರಣೆ ಈ ಶ್ಲೋಕದಲ್ಲೂ ಭಗವಂತನಿಗೆ ನಾನಾಸೇವೆ ಮಾಡುತ್ತಿರುವ ಆದಿಶೇಷನನ್ನು ಆಚಾರ್ಯರು ವರ್ಣಿಸಿದ್ದಾರೆ ಸರ್ವೇಶ್ವರನ ಸರ್ವವಿಧವಾದ ಭೋಗಕ್ಕೆ ಬೇಕಾದ ಶೇಷವಸ್ತು ತಾನು ಎಂಬುದನ್ನು ಪ್ರಕಾಶಪಡಿಸುವುದೇ ಆದಿಶೇಷನ ಅವತಾರ ಒಂದೇ ವ್ಯಕ್ತಿ ಸಕಲ ವಿಧದಲ್ಲೂ ಅನ್ಯರ ಅಪೇಕ್ಷೆಯಿಲ್ಲದೆ ಭಗವಂತನಿಗೆ ವಿಧೇಯನಾಗಿದ್ದುಕೊಂಡು ಸ್ವಾರ್ಥಲೇಶವಿಲ್ಲದೆ, ಈಶ್ವರನ ಪರತ್ವವನ್ನು ಸಂಕೋಚಪಡಿಸದಂತೆ ಸೇವೆಸಲ್ಲಿಸುವ ಮಹಾತ್ಮ ಆದಿಶೇಷ ಇವನು ಪತಂಜಲಿಯಾಗಿ ತೋರಿಬಂದು ಶಬ್ದಶಾಸ್ತ್ರದ ರೂಪ ಪ್ರಯೋಜನಗಳನ್ನು ತಿಳಿಸಿಕೊಟ್ಟ ವ್ಯಾಕರಣಶಾಸ್ತ್ರದ ವ್ಯಾಖ್ಯಾತರಲ್ಲಿ ಪ್ರಥಮಸ್ಥಾನ ಪಡೆದವನು ಅನಂತರ ಆ ಶಾಸ್ತ್ರದಲ್ಲಿ ಪರಮಾರ್ಥವನ್ನು ಕಾಣಬೇಕಾದರೆ ಯೋಗವೆಂಬ ಕ್ರಮ ಅನುಸರಿಸಿ ಚೇತನ ಮತ್ತು ಅಚೇತನ ವಿಷಯಗಳಲ್ಲಿ ಭಾವಶುದ್ಧಿ ಪಡೆದು, ಏಕಮನಸ್ಸಿನಿಂದ ಸಮಾಧಿ ಎಂಬ ಭಗವಂತನ ಅನುಭವ ಸಾಧನ, ಅದರ ಫಲ ಕೈಗೊಳ್ಳುವ ಮತ್ತು ಅನುಭವಿಸುವ ವಿಧಾನವನ್ನು ಚೇತನನಿಗೆ ಒದಗಿಸುವ ಶಬ್ದಶಾಸ್ತ್ರ ಅದನ್ನು ಅವಲಂಬಿಸಿ ಜೀವಾತ್ಮನು ಸರ್ವಸಂಗಪರಿತ್ಯಾಗದಿಂದ ನಿಜವಾದ ಪರಮಾರ್ಥ ತತ್ವ ಕಾಣುತ್ತಾನೆ

ಪರಮಾತ್ಮನ ವಿಧೇಯನಾಗಿರುವುದನ್ನು ಉಳಿಸಿಕೊಂಡು ಬರುವುದೇ ಜೀವಾತ್ಮನ ಗುರಿ ಶೇಷ ಭೂತನಾದ ನಾಗರಾಜನು ತನ್ನನ್ನು ತೋರಿಸಿಕೊಳ್ಳುವುದು ಸಂಬಂಧ ಜ್ಞಾನ ಜನಿತ ಸ್ವರೂಪವೃತ್ತಿ ಶೇಷ ಶಬ್ದಕ್ಕೆ ಆಚಾರ್ಯರಾಮಾನುಜರು "ಇನ್ನೊಬ್ಬನ ವೈಭವ ಹೆಚ್ಚಿಸುವ ಒಂದೇ ಉದ್ದೇಶದಿಂದ, ಪರಿಗ್ರಹಯೋಗ್ಯತೆಯು ಯಾವನಿಗೆ ಸ್ವರೂಪಸಿದ್ಧವೋ ಅವನೇ ಶೇಷ ಆ ಇನ್ನೊಬ್ಬನೇ ಶೇಷೀ" ಆದಿಶೇಷನಿರುವುದೇ ಭಗವಂತನ ನಾನಾವಿಧವಾದ ಸೇವೆಗೆ. ಆಕಾರಣ "ಶೇಷ ಇತೀರಿತೇ ಜನೈಃ" - ಇತರ ಚೇತನರು ಈ ಅಸಾಧಾರಣ ವೈಭವವನ್ನು ಅನಂತನಲ್ಲಿ ಕಂಡರು ಅವನಿಗೆ ಶೇಷ - ಇದು ವೃತ್ತಿ ನಿಬಂಧನವಾದ ಹೆಸರು ಆದಿಶೇಷ ಇವನು ಭಗವಂತನ ಭೋಗ ಪ್ರಪಂಚದಲ್ಲಿ ಏಕೈಕನಾದ ವ್ಯಕ್ತಿಯಾಗಿರುತ್ತಾನೆ ಭೋಗಕ್ಕೆ ಈಶ್ವರ, ಜೊತೆಗೆ ಮಹಾಲಕ್ಷ್ಮಿ ಇದನ್ನು ಒದಗಿಸಲು ಲಕ್ಷ್ಮೀಪತಿಯಾದ ಆದಿಭೂತ ದ್ರವ್ಯಕ್ಕೆ ಕೂಡಿಕೊಂಡಿರುವ ಚೇತನ - ಕಿಂಕರ ಇದರ ಪರಮಾರ್ಥ ಅಕಾರ ಪರಮಾತ್ಮ ಉ - ಶ್ರೀದೇವಿಃ ಮಕಾರ ಚೇತನ ಜಗತ್ತಿನ ಚೇತನ ಮತ್ತು ಅಚೇತನ ಎಲ್ಲವೂ ಈಶ್ವರನಿಗೆ ಶೇಷ ಆದರೆ ಇವುಗಳಲ್ಲಿ ಆದಿಭೂತನಾದವನು ನಾಗರಾಜ ಉಳಿದವರು ಅನಂತರ ಬರುತ್ತಾರೆ ಅನಂತ ಗರುಡ ವಿಷ್ವಕ್ಸೇನ ಎಂಬ ವಾಕ್ಯದಲ್ಲಿ ಮೊದಲನೆಯವನು ಅನಂತನಾದ ನಾಗರಾಜ ರಾಮಾಯಣದಲ್ಲಿ ಸೀತಾರಾಮರ ಚರಿತ್ರೆಯಲ್ಲಿ ತನ್ನನ್ನು ಹೆಚ್ಚಾಗಿ ತೋರಿಸಿಕೊಳ್ಳದೆ ಸರ್ವಸೇವೆಯನ್ನೂ ಏಕಾಂಗಿಯಾಗಿ ನೆರವೇರಿಸುತ್ತಿದ್ದ ಲಕ್ಷ್ಮಣನ ವೃತ್ತಿ ತೋರುತ್ತದ



ಗಿರಿಯೊಳೇ ಹಿಮಾದ್ರಿಯಧಿಕಂ

ತರಂಗಿಣೀಗಣದೆ ಗಂಗೆಯನುಪಮ ತೀರ್ಥಂ

ತರುವೊಳ್ ಮಳಯಜಮಮಳಂ

ನರರೊಳ್ ವಿದ್ಯಾವಿವೇಕ ಭರಿತಂ ಶ್ರೇಷ್ಠಂ



# ಗಯೆ

- ಆದ್ಯರಾಮಾಚಾರ್ಯ.

ಉತ್ತರ ಭಾರತದ ತ್ರಿಸ್ಥಳ ಯಾತ್ರೆಯಲ್ಲಿ ಗಯಾ ಕ್ಷೇತ್ರಕ್ಕೆ ವಿಶೇಷ ಮಹತ್ವವಿದೆ ಇದು ಬಿಹಾರ ರಾಜ್ಯದಲ್ಲಿಯೇ ಬಹು ಮುಖ್ಯವಾದ ಜಿಲ್ಲೆಯಾಗಿದೆ ಇಲ್ಲಿ ಹರಿವ ಫಲ್ಗು ಣಿನದಿಯ ದಂಡೆಯ ಮೇಲಿರುವ ವಿಷ್ಣುಪಾದವೇ ಈ ಕ್ಷೇತ್ರದ ಮುಖ್ಯವಾದ ಕೇಂದ್ರಸ್ಥಾನವೆನಿಸಿದೆ ಈ ಭಾಗವನ್ನು ಹಳೆಯ ಗಯಾ ಎಂದೆನ್ನುತ್ತಾರೆ ಪಟ್ಟಣದ ಬಹು ಭಾಗ ಬೆಳೆದುದನ್ನು ಸಾಹೇಬಗಂಜ ಎಂದು ವಿಭಾಗಿಸಲಾಗಿದೆ ಶ್ರದ್ಧಾಳುಗಳಾದವರು ಗಯಾ ಕ್ಷೇತ್ರದಲ್ಲಿರುವ ವಿಷ್ಣುಪಾದದ ಮೇಲೆ ಪಿಂಡಪ್ರದಾನ ಮಾಡಿದಲ್ಲಿ ತಮ್ಮ ಪಿತೃಗಳಿಗೆಲ್ಲ ಸದ್ಗತಿಯು ಲಭಿಸುವದೆಂಬ ನಂಬಿಕೆಯು ಇದೆ

ವಿಷ್ಣುಪಾದವಿರುವ ಮಂದಿರವು ಬಹು ಪ್ರಾಚೀನವಾದುದು ಈ ಕ್ಷೇತ್ರದಲ್ಲಿ ಶೃಂಗೇರಿ ಮಠ ಹಾಗೂ ಶ್ರೀಮದುತ್ತರಾದಿ ಮಠಗಳಿವೆ ವಿಷ್ಣುಪಾದದ ಪೂಜೆಯ ಎಲ್ಲ ಹಕ್ಕುಗಳು ಶ್ರೀಮದುತ್ತರಾದಿ ಮಠದವರಿಗೆ ಮಾತ್ರ ಸೇರಿದುದಾಗಿದೆ ಗಯಾದಲ್ಲಿರುವ ಬ್ರಾಹ್ಮಣರನ್ನು ಗಯಾವಾಳರೆಂದು ಕರೆಯುತ್ತಾರೆ ಅವರೆಲ್ಲರೂ ಉತ್ತರಾದಿ ಮಠದ ಶಿಷ್ಯರಿದ್ದು, ಶುದ್ಧ ದ್ವೈತಸಂಪ್ರದಾಯವಾದಿಗಳಾಗಿದ್ದು, ಶಾಂತಿ ಪಾಠಪೂರ್ವಕ ದ್ವೈತ ಗ್ರಂಥಗಳನ್ನು ಅಭ್ಯಾಸಮಾಡುತ್ತಾರೆ ದೇವಸ್ಥಾನದ ಮಧ್ಯಭಾಗದಲ್ಲಿ ಅಷ್ಟಕೋನಾಕೃತಿಯ ಕುಂಡವಿದ್ದು, ಅದಕ್ಕೆ ಬೆಳ್ಳಿಯ ಕವಚ ತೊಡಿಸಲಾಗಿದೆ ಅದರ ಮಧ್ಯದಲ್ಲಿ ವಿಷ್ಣುವಿನ ಪಾದ ಚಿಹ್ನೆಯು ಇದೆ ಕೊನೆಯ ಪೂಜೆ ಹಾಗೂ ನೈವೇದ್ಯಾದಿಗಳನ್ನು ವಿಷ್ಣು ಸಹಸ್ರನಾಮ ಪಠನದೊಂದಿಗೆ ತುಳಸಿ ಅರ್ಚನೆ ಮಾಡಿದ ನಂತರ ಮಂಗಳಾರತಿ ಮಾಡಲಾಗುತ್ತದೆ ಈ ಮರ್ಯಾದೆಯು ಕೇವಲ ಉತ್ತರಾದಿ ಮಠಕ್ಕೆ ಸೇರಿದುದಾಗಿದೆ

ಈ ಕ್ಷೇತ್ರದಲ್ಲಿ ಫಲ್ಗುಣಿ ನದಿಯಲ್ಲಿಯೂ ಸಹ ಅನೇಕ ತೀರ್ಥಗಳಿವೆ ಅವುಗಳಲ್ಲಿ ಪ್ರೇತಶಿಲಾ ತೀರ್ಥ, ರಾಮತೀರ್ಥ, ಧರ್ಮಾರಣ್ಯ ತೀರ್ಥ, ಅಕ್ಷಯ ವಟ, ಗದಾಲೋಲ - ಮೊದಲಾದ ಸ್ಥಳಗಳಲ್ಲಿ ಪಿತೃಕಾರ್ಯಗಳು ನಡೆಯುವುದುಂಟು ವಿಷ್ಣುಪಾದದ ಮೇಲೆ ಪಿಂಡಗಳನ್ನು ಸಮರ್ಪಿಸಿದ ನಂತರ ಅಕ್ಷಯ ವಟದಡಿಯಲ್ಲಿ ಪುರೋಹಿತರಿಗೆ ಸಂಭಾವನೆಯನ್ನೀಯುವುದರೊಂದಿಗೆ ಈ ಕ್ಷೇತ್ರದ ವಿಧಿಯು ಮುಗಿದಂತಾಗುತ್ತದೆ. ಈ ಕೊನೆಯ ಹಂತದಲ್ಲಿ ಪುರೋಹಿತರು ಕೇಳಿದಷ್ಟು ಹಣವನ್ನಿತ್ತಾಗಲೇ ಗಯಾ ಕ್ಷೇತ್ರದ ಯಾತ್ರಾಫಲವು ಲಭಿಸುತ್ತದೆಂದು ಯಾತ್ರಿಕರಿಗೆ ಮನಕ್ಕೆ ಬಿಂಬಿಸುವಂತೆ ಹೇಳುವುದುಂಟು ಅದೇ ರೀತಿಯಾಗಿ ಗಯಾ ಕ್ಷೇತ್ರದಲ್ಲಿ ತಮಗಿಷ್ಟವಾದ ಭಕ್ಷ್ಯಗಳನ್ನಾಗಲೀ ಅಥವಾ ಫಲಗಳನ್ನಾಗಲೀ ತ್ಯಜಿಸುವನು ಎಂಬ ಪ್ರತಿಜ್ಞಾಪೂರ್ವಕ ಸಂಕಲ್ಪ ಮಾಡುವ ಪದ್ಧತಿಯೂ ಇದೆ ಇಲ್ಲಿ ಹರಿವ ಫಲ್ಗುಣಿ ನದಿಯು ಒಂದು ಕಿರಿ ತೊರೆಯಂತಿದೆ ಬೇಸಿಗೆಯಲ್ಲಿ ಬತ್ತಿ ಹೋಗುವುದರಿಂದ ಅಲ್ಲಲ್ಲಿ ಹೊಂಡ ತೆಗೆದು ಆ ಸ್ಥಳದಲ್ಲಿಯೇ ಪಿತೃಕಾರ್ಯಗಳು ನಡೆಯುತ್ತವೆ ಮೊದಲು ಈ ಪ್ರವಾಹವು ಹಾಲಿನ ಹೊಳೆಯಾಗಿ ಹರಿಯುತ್ತಿತ್ತಂತೆ ಶ್ರೀರಾಮಚಂದ್ರನ ಶಾಪದಿಂದಾಗಿ ಈಗ ಜಲರೂಪದಲ್ಲಿ ಹರಿಯುವಂತಾಯಿತೆಂದು ಸ್ಥಳಪುರಾಣವು ತಿಳಿಸುತ್ತದೆ

ಈ ಕ್ಷೇತ್ರದ ಕಥೆಯೂ ಸಹ ಬಹು ಮೋಹಕವಾಗಿದೆ ಗಯಾಸುರನೆಂಬ ದಾನವನೊಬ್ಬನಿದ್ದ ಆತ ಮಹದೇವನನ್ನು ಕುರಿತು ಕಠೋರ ತಪಸ್ಸು ಮಾಡಿ ಆ ದೇವನು ಪ್ರತ್ಯಕ್ಷನಾದಾಗ ಯಾರು ತನ್ನ ದರ್ಶನ ಪಡೆಯುವರೋ ಅವರಿಗೆ ಸದ್ಗತಿಯು ಲಭಿಸುವಂತಾಗಲೆಂದು ವರಪಡೆದುಕೊಂಡನಂತೆ ಇದರಿಂದಾಗಿ ಭೂಲೋಕದಲ್ಲಿ ಯಜ್ಞ ಯಾಗಾದಿಗಳೆಲ್ಲ ಕುಂಠಿತಗೊಳ್ಳತೊಡಗಿದವು ಕರ್ಮಕಾಂಡವೇ ನಿಂತು ಹೋಯಿತು ನಾನಾ ಭಾಗಗಳಿಂದ ಜನರು ಧಾವಿಸಿ ಬಂದು ಗಯಾಸುರನ ದರ್ಶನ ಮಾತ್ರದಿಂದ ಪುನೀತರಾಗತೊಡಗಿದರು ಇದರಿಂದಾಗಿ ದೇವಲೋಕದಲ್ಲಿ ಬಹು ದೊಡ್ಡ ಚಿಂತೆಯು ಆವರಿಸಿಕೊಡಿತು ದೇವತೆಗಳ ನಿಯೋಗವು ಸತ್ಯಲೋಕಕ್ಕೆ ಹೋಗಿ ಭೂಲೋಕದಲ್ಲಿ ಕರ್ಮಕಾಂಡವೆಲ್ಲ ನಿಂತುಹೋದುದನ್ನು ತೋಡಿಕೊಂಡರು ಆಗ ಬ್ರಹ್ಮದೇವನು ಈ ವಿಚಾರಗಳನ್ನು ವೈಕುಂಠಪತಿಯಲ್ಲಿ ಅರಿಕೆ ಮಾಡಿಕೊಂಡಾಗ ಅವರಿಬ್ಬರೂ ಬ್ರಾಹ್ಮಣ ವೇಷಧಾರಿಗಳಾಗಿ ಗಯಾಸುರನ ಮುಂದೆ ಬಂದು ನಿಂತುಕೊಂಡರು ಆಗ ದಾನವನು ಕೈಮುಗಿದು ತಮಗೇನು ಬೇಕು ಎಂಬುದನ್ನು ತಿಳಿಸಲು ಪ್ರಾರ್ಥಿಸಿಕೊಂಡನು

ಈ ಭಾಗದಲ್ಲಿ ನಾವು ಬಹು ದೊಡ್ಡ ಯಜ್ಞವನ್ನು ಮಾಡುವ ಸಂಕಲ್ಪದಿಂದ ಬಂದಿದ್ದೇವೆ ಅದಕ್ಕಾಗಿ ಶುದ್ಧವಾದ, ಪವಿತ್ರವಾದ ಸ್ಥಳವನ್ನು ನೀನು ಕೊಡಬಹುದೇ ? ಎಂದು ಕೇಳಿಕೊಂಡರು ಗಯಾಸುರನು ತೋರಿಸಿದ ಸ್ಥಳಗಳಲ್ಲಿ ಒಂದಿಲ್ಲೊಂದು ನ್ಯೂನತೆಗಳೇ ಕಾಣಿಸಿಕೊಂಡವು. ಆಗ ಗಯಾಸುರನು ಸ್ವಾಮಿ, ವಿಪ್ರೋತ್ತಮರೇ, ನನಗೆ ತೋಚಿದ ಸ್ಥಳಗಳನ್ನೆಲ್ಲ ತೋರಿಸಿದೆ ಆದರೆ ತಾವು ಒಪ್ಪಲಿಲ್ಲ ಈಗೇನು ಮಾಡುವುದು ? ಎಂದು ಚಿಂತಾಕ್ರಾಂತನಾಗಿ ಕೇಳಿಕೊಂಡನು ಆಗ ವೈಕುಂಠಾಧಿಪತಿಯು,

ಗಯಾಸುರನೇ, ನಿನ್ನ ದೇಹ ಅತ್ಯಂತ ಪರಿಶುದ್ಧವಾದುದು ಮಹಾ ಪವಿತ್ರವಾದ ನಿನ್ನ ದೇಹದ ಮೇಲೆ ಅಂದರೆ ಬೆನ್ನಿನ ಮೇಲೆ ಅಗ್ನಿ ಕುಂಡವನ್ನು ಸ್ಥಾಪಿಸಿ ಅಲ್ಲಿಯೇ ಯಾಗವನ್ನಾರಂಭಿಸಿದರೆ ಹೇಗೆ ? ಎಂದು ಯೋಚಿಸುತ್ತಿದ್ದೇವೆ, ಎಂದನು

ವಿಪ್ರೋತ್ತಮರೇ ಇದಕ್ಕಿಂತ ಬೇರೆ ಭಾಗ್ಯವುಂಟೇ ? ನನ್ನ ಪುಣ್ಯವೇ ಪುಣ್ಯ, ತಮ್ಮ ಅಪೇಕ್ಷೆಯಂತೆ ನಾನು ಮಲಗುತ್ತೇನೆ ನನ್ನ ಬೆನ್ನಿನ ಮೇಲೆ ನೀವು ಯಜ್ಞವನ್ನು ಆರಂಭಿಸಿರಿ, ನಾನು ಧನ್ಯನಾಗುತ್ತೇನೆ ಎಂದು ಪ್ರಾರ್ಥಿಸಿಕೊಂಡನು

ಯಜ್ಞಕಾಂಡವು ಆರಂಭವಾಯಿತು ದಿನ ಕಳೆದಂತೆಲ್ಲ ಅಗ್ನಿಯ ಕಾವಿನಿಂದಾಗಿ ಗಯಾಸುರನಿಗೆ ಕಸಿವಿಸಿಯಾಗತೊಡಗಿತು ಆ ವೇಳೆಗಾಗಲೇ ಆರು ತಿಂಗಳು ಗತಿಸಿ ಹೋಗಿದ್ದವು. "ಪ್ರಭು, ಈ ಯಜ್ಞವು ಇನ್ನೆಷ್ಟು ದಿನಗಳವರೆಗೆ ಸಾಗುತ್ತದೆ" ಎಂದು ಕೇಳಿದನು ಆತನಲ್ಲಿ ಸ್ವಾರ್ಥದ ಭಾವನೆಯಾಗಲೀ ಅಥವಾ ಲೋಭಿತನವಾಗಲೀ ಲವಲೇಶವೂ ಇರಲಿಲ್ಲ ಆತನು ಮಹಾ ಕರುಣಾಸಾಗರನಾಗಿದ್ದ ಪ್ರಜೆಗಳೆಲ್ಲ ಆತನ ತ್ಯಾಗವನ್ನು ಕಂಡು ಹೊಗಳತೊಡಗಿದ್ದರು ಆತನ ಅಂತ

# ತಿ.ತಿ.ದೇ. ಧಾರ್ಮಿಕ ಗ್ರಂಥಗಳು

ಉತ್ಕೃಷ್ಟ ಧಾರ್ಮಿಕ ಗ್ರಂಥಗಳನ್ನು ಓದುಗರ ಅನುಕೂಲಕ್ಕಾಗಿ ಸರಸವಾದ ದರಗಳಲ್ಲಿ ಒದಗಿಸಲು ಯೋಜಿಸಲಾಗಿದ್ದು ಅವುಗಳ ವಿವರಪಟ್ಟಿಯನ್ನಿಲ್ಲಿ ನೀಡಲಾಗಿದೆ

| | | |
|---|---|---|
| ಅಡ್‌ಮಿನಿಸ್ಟ್ರೇಷನ್ ಆಫ್ ಟೆಂಪಲ್ಸ್ | -ಡಾ|| ಪಿ. ಅನ್ನಾರಾವ್ | ರೂ 25-00 |
| ಎ. ಸಿನಾಪ್ಸಿಸ್ ಆಫ್ ಶ್ರೀಮದ್ಭಾಗವತಂ | ಸಂ 1 - ಸ್ಕಂ - 1 ರಿಂದ 8. ಆರ್.ವಿ.ಎಸ್ ಆಚಾರ್ಯ | ರೂ 7-00 |
| ಭಕ್ತ ಪುರಂದರದಾಸ | - ಕೆ ಅಪ್ಪಣ್ಣಾಚಾರ್ಯ/ ವಿ. ಎಸ್ ರಾವ್ | ರೂ 1-25 |
| ಹೋಲಿ ಟ್ರಿನಿಟಿ | -ಡಾ|| ಜಿ. ಟಿ. ಗೋಪಾಲಕೃಷ್ಣನಾಯುಡು | ರೂ. 1-00 |
| ಪ್ರಸನ್ನವೆಂಕಟದಾಸ | - ವಿ. ಬಾದರಾಯಣ ಮೂರ್ತಿ | ರೂ. 1-50 |
| ಸದ್ಗುರು ತ್ಯಾಗಬ್ರಹ್ಮಪುಷ್ಪಾಂಜಲಿ | - ಶ್ರೀಮತಿ ಪುಷ್ಪ ಶ್ರೀವತ್ಸನ್ | ರೂ. 250-00 |
| 108 ವೈಷ್ಣವೈಟ್ ದಿವ್ಯದೇಶಂಸ್ - ಸಂ - III | ಶ್ರೀಮತಿ ಎಂ. ಎಸ್ ರಮೇಶ್ | ರೂ. 60-00 |
| 108 ವೈಷ್ಣವೈಟ್ ದಿವ್ಯದೇಶಂಸ್ - ಸಂ - IV | ಶ್ರೀಮತಿ ಎಂ ಎಸ್ ರಮೇಶ್ | ರೂ. 60-00 |
| ಊರ್ಧ್ವ ಮೂಲ | - ಲೆ|| ಕ|| ಎ. ಎಸ್ ರಾಮಚಂದ್ರನ್ ಎಂ. ಡಿ. | ರೂ. 12-00 |
| ವ್ಯಾಸರಾಯಲು | - ಕೆ ಅಪ್ಪಣ್ಣಾಚಾರ್ಯ / ವಿ ಎಸ್ ರಾವ್ | ರೂ. 0-75 |
| ವಿಶಿಷ್ಟಾದ್ವೈತ | ಎ.ಎಸ್ ರಾಘವನ್ | ರೂ.10-25 |
| ವಿಷನ್ ಆಫ್ ಆರ್ಯನ್ ಗ್ಲೋರಿ | ಡಾ|| ಇ. ಅನಂತಾಚಾರ್ಯ | ರೂ. 1-25 |
| ನಮ್ಮಾಳ್ವಾರ್ | ವಿ ವರದಾಚಾರಿ | ರೂ 3-00 |
| ತಿರುಮಳಿಶೈ ಆಳ್ವಾರ್ | ಡಾ|| ಪ್ರೇಮ ನಂದಕುಮಾರ್ | ರೂ. 5-00 |
| ಪದ್ಮಾವತೀದೇವಿ ಟೆಂಪಲ್ | | ರೂ 2-60 |
| ಶ್ರೀ ವೈಷ್ಣವಸಂಪ್ರದಾಯಂ ಇನ್ ತಿರುಮಲ | ಟಿ.ಎ.ಕೆ ಸ್ವಾಮಿ/ ಡಾ|| ಎಂ ವರದರಾಜನ್ | ರೂ. 1-25 |
| ಶ್ರೀಮದ್ ಭಗವದ್ಗೀತ | ಎಸ್ ಸುಬ್ಬರಾವ್ | ರೂ 20-00 |
| ಗೃಹವೈದ್ಯಂ (ಬಾಲರಾಜಮಹರ್ಷಿ) | ಅ ಪಿ ಎಸ್ ಶಂಕರ ರೆಡ್ಡಿ | ರೂ 6-00 |
| ಹಿಸ್ಟರಿ ಆಫ್ ತಿರುಪತಿ ಸಂ - 1 | ಟಿ. ಕೆ ಟಿ ವೀರರಾಘವಾಚಾರ್ಯ | 37-00 |
| ಹಿಸ್ಟರಿ ಆಫ್ ತಿರುಪತಿ ಸಂ - 2 | ಟಿ. ಕೆ ಟಿ ವೀರರಾಘವಾಚಾರ್ಯ | 30-00 |
| ಹಿಸ್ಟರಿ ಆಫ್ ತಿರುಪತಿ ಸಂ - 3 | ಟಿ. ಕೆ ಟಿ ವೀರರಾಘವಾಚಾರ್ಯ | 10-00 |
| ತಿರುಮಲ - ತಿರುಪತಿ - ತಿರುಚಾನೂರು | ಡಾ|| ಎಂ ರಾಮರಾವ್ | ರೂ. 8-00 |
| ತಿರುಪತಿ ಶ್ರೀ ವೆಂಕಟೇಶ್ವರ | ಸಾಧುಸುಬ್ರಹ್ಮಣ್ಯಶಾಸ್ತ್ರಿ | ರೂ. 100-00 |
| ಅಲಂಕಾರ ಸಂಗ್ರಹ (ಅಮೃತಾನಂದಯೋಗಿ) | ಸಂ - ಕೆ. ಭಾಸ್ಕರರಾವ್ | ರೂ. 1-00 |
| ಬ್ರಹ್ಮಸೂತ್ರ ಭಾಷ್ಯಂ ಸ್ಕಂ - 1 (ಆನಂದತೀರ್ಥರು) | ಸಂ - ಆರ್ ರಾಮಮೂರ್ತಿಶರ್ಮ | ರೂ. 30-00 |
| ಭಾಗವತ ಮಹಾಪುರಾಣಂ ಸ್ಕಂ - 1 (ವೇದವ್ಯಾಸರು) (ವ್ಯಾಖ್ಯಾನ ಸಹಿತ) | ಸಂ - ಡಾ|| ಪಿ. ರಾಧಾಕೃಷ್ಣಶರ್ಮ | ರೂ. 75-00 |
| ಭಾಗವತ ಮಹಾಪುರಾಣಂ ಸ್ಕಂ - 10 (ವೇದವ್ಯಾಸರು) (ವ್ಯಾಖ್ಯಾನ ಸಹಿತ) ಭಾಗ-1 | ಸಂ - ಡಾ|| ಎನ್ ಸಿ. ವಿ. ನರಸಿಂಹಾಚಾರ್ಯ | ರೂ. 100-00 |
| ಗೀತಿಕಾನಕ್ಷತ್ರಮಾಲಿಕಾ (ಅನ್ನಮಾಚಾರ್ಯ) | ಸಂ - ಡಾ|| ಎನ್ ಸಿ. ವಿ. ನರಸಿಂಹಾಚಾರ್ಯ | ರೂ. 2-50 |
| ಗೋಪಾಲ ಸಹಸ್ರನಾಮಸ್ತೋತ್ರಂ | ಸಂ - ಡಾ|| ಎನ್ ಎಸ್ ಆರ್ ತಾತಾಚಾರ್ಯ ಡಾ|| ಎಂ ಡಿ ಬಾಲಸುಬ್ರಹ್ಮಣ್ಯಂ | ರೂ. 5-00 |
| ಕಠೋಪನಿಷತ್ ಭಾಷ್ಯಂ (ರಾಮಾನುಜ ಭಾಷ್ಯ) | ಸಂ - ಡಾ|| ಕೆ ಸಿ. ವರದಾಚಾರಿ ಡಿ. ಟಿ. ತಾತಾಚಾರ್ಯ | ರೂ 15-00 |
| ಕಪಿಲೇಶ್ವರ ಸುಪ್ರಭಾತ | ಎಂ ವಿ. ರಾಮನಾಥ ಘನಪಾಠಿ | ರೂ. 0-10 |
| ಶ್ರೀ ಲಲಿತಾ ಸಹಸ್ರನಾಮಂ (ಭಾಸ್ಕರ ರಾಯ ಭಾಷ್ಯಸಹಿತ) | ಸಂ - ಡಾ|| ಎಸ್ ಬಿ ರಘುನಾಥಾಚಾರ್ಯ | ರೂ. 28-00 |
| ಮಾರ್ಕಂಡೇಯ ಸಂಹಿತಾ (ಪಾಂಚರಾತ್ರ) | | ರೂ 18-00 |
| ಶ್ರೀಮತ್ ಸೀತಾರಾಮಾಂಜನೇಯಂ | ಡಾ|| ಅರ್ಕಸೋಮಯಾಜಿ. | ರೂ. 50-00 |
| ತತ್ತ್ವ ಸಂಖ್ಯಾನಂ (ಆನಂದತೀರ್ಥರು) (ಟೀಕಾಚಾರ್ಯರ ಟೀಕೆಯ ಸಮೇತ) | ಸಂ - ಆರ್ ರಾಮಮೂರ್ತಿಶರ್ಮ | ರೂ. 2-00 |
| ಶ್ರೀ ವೈಖಾನಸ ಗೃಹ್ಯಸೂತ್ರಂ ಸಂ - 1 | ರೊಂ ಪಾರ್ಥಸಾರಥಿ ಭಟ್ಟಾಚಾರ್ಯ | ರೂ 49-00 |
| (ಸೂತ್ರತಾತ್ಪರ್ಯ ಚಿಂತಾಮಣಿ ಸಹಿತ) ಸಂ - 2 | ರೊಂ ಪಾರ್ಥಸಾರಥಿ ಭಟ್ಟಾಚಾರ್ಯ | ರೂ 40-00 |

ಸಗಟು ಖರೀದಿಗೆ ಆಕರ್ಷಕ ರಿಯಾಯಿತಿ ಉಂಟು. ಅಂಚೆವೆಚ್ಚ ಪ್ರತ್ಯೇಕ ವಿ.ಪಿ.ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗುವುದು ತಮ್ಮ ಅಗತ್ಯಗಳಿಗಾಗಿ ಕೂಡಲೇ ಬರೆಯಿರಿ

ಪುಸ್ತಕ ಮಾರಾಟ ವಿಭಾಗ,
ತಿ.ತಿ.ದೇ., ತಿರುಪತಿ - 517 507.

ರಂಗವನ್ನು ಅರ್ಥಮಾಡಿಕೊಂಡ ಬ್ರಾಹ್ಮಣ ವೇಷಧಾರಿಗಳಾದ ಸತ್ಯಲೋಕಾಧಿಪತಿ ಬ್ರಹ್ಮ ಹಾಗೂ ವೈಕುಂಠಪತಿ ವಿಷ್ಣು ಪ್ರತ್ಯಕ್ಷರಾಗಿ ಇನ್ನು ಮೂರು ತಿಂಗಳ ಕಾಲಾವಧಿಯಲ್ಲಿ ಈ ಯಜ್ಞವು ಪರಿಸಮಾಪ್ತಿ ಹೊಂದುವದಾಗಿ ತಿಳಿಸಿದರು ಈ ಘಟನೆಯಿಂದಾಗಿ ದೇವಲೋಕದಲ್ಲಿ ಆನಂದದ ಹೊಳೆ ಹರಿಯುವಂತಾಯಿತು ಗಯಾಸುರನ ಪ್ರಜೆಗಳು ಆತನ ಹೆಸರಿನಿಂದ ಜಯಜಯಕಾರ ಮಾಡದೊಡಗಿದರು ಆಗ ಗಯಾಸುರನು ಹೇಳಿದ, "ನನಗಾವ ತೊಂದರೆಯೂ ಇಲ್ಲ ನಿರ್ವಿಘ್ನವಾಗಿ ಈ ಯಜ್ಞವು ಪರಿಸಮಾಪ್ತಿ ಹೊಂದಲಿ ನನ್ನ ಜಡ ಶರೀರವು ಈ ಮಹತ್ಕಾರ್ಯಕ್ಕೆ ಉಪಯೋಗವಾದಲ್ಲಿ ನನ್ನಂಥ ಅದೃಷ್ಟವಂತರು ದೇರೊಬ್ಬರಿದ್ದಾರೆಯೆ ? ನಿಮ್ಮ ಕೆಲಸವನ್ನು ಮುಂದುವರಿಸಿರಿ ಎಂದನು

ಒಂಬತ್ತು ತಿಂಗಳು ಪೂರ್ಣಗೊಂಡವು. ಪೂರ್ಣಾಹುತಿಯ ಕಾಲವು ಸನ್ನಿಹಿತವಾಯಿತು ಆಗ ಗಯಾಸುರನು ಕೇಳಿಕೊಂಡ "ಭಗವನ್, ಈ ಯಜ್ಞಕ್ಕೆ ನನ್ನ ಪಂಚಪ್ರಾಣಗಳನ್ನೇ ಪೂರ್ಣಾಹುತಿಯಾಗಿ ಸಮರ್ಪಿಸಿರಿ ಯಾಕೆಂದರೆ ಈಗ ನನಗಾವ ಮೋಹವೆಂಬುದಿಲ್ಲ ಕಲ್ಯಾಣದ ಅಹಂಭಾವವೂ ನನ್ನಲ್ಲಿಲ್ಲ ಎಲ್ಲವೂ ಬ್ರಹ್ಮಾರ್ಪಣವಾಗಲೆಂಬ ಒಂದೇ ಒಂದು ಅಪೇಕ್ಷೆಯು ಇದೆ" ಆ ಸಮಯಕ್ಕೆ ಸರಿಯಾಗಿ ಯಮಧರ್ಮರಾಯನು ಆಗಮಿಸಿದ ಭಗವನಾನ್ ವಿಷ್ಣು ಆತನ ತಲೆಯ ಮೇಲೆ ತನ್ನ ಕಾಲನ್ನಿರಿಸಿದ ನಿನ್ನ ಕೊನೆಯ ಅಪೇಕ್ಷೆಯೇನಾದರೂ ಇದ್ದರೆ ತಿಳಿಸು ಎಂದು ಕೇಳಿದ "ಮಹಾಪ್ರಭೂ, ಇಂದಿನಿಂದ ಈ ಕ್ಷೇತ್ರವು ಗಯಾಕ್ಷೇತ್ರವೆಂಬ ಹೆಸರಿನಿಂದ ಪ್ರಸಿದ್ಧಿ ಹೊಂದಲಿ ನೀನು ಗದಾಧರನಾಗಿ ಈ ಕ್ಷೇತ್ರದಲ್ಲಿ ಸದಾ ಸನ್ನಿಹಿತನಾಗಿರಬೇಕೆಂಬುದೇ ನನ್ನ ಅಪೇಕ್ಷೆಯಾಗಿದೆ" ಎಂದು ತಿಳಿಸಿದಾಗ, ಭಕ್ತಪರಾಧೀನನಾದ ಶ್ರೀಮನ್ನಾರಾಯಣನು ಆತನ ಅಪೇಕ್ಷೆಯಂತೆ ಗದಾಧರನಾಗಿ ಗಯಾ ಕ್ಷೇತ್ರದಲ್ಲಿರುವೆನೆಂದು ಹೇಳಿದೊಡನ ಆತನ ಪ್ರಾಣಪಕ್ಷಿಯು ವೈಕುಂಠ ಲೋಕವನ್ನು ಕುರಿತು ಪ್ರಯಾಣ ಬೆಳೆಸಿತು ಇದು ಗಯಾ ಗದಾಧರ ಕ್ಷೇತ್ರ ಪುರಾಣದಲ್ಲಿ ಉಪಲಬ್ಧವಾದ ಕಥೆಯಾಗಿರುವುದು



# ಹಿಂದೂಧರ್ಮ

- ಡಾ|| ಎಚ್. ವಿ. ನರಸಿಂಹಮೂರ್ತಿ.

'ಹಿಂದೂಧರ್ಮವೆಂದರೇನು ? ಸ್ವಲ್ಪ ವಿವರಿಸುವಿರಾ?' ಎಂಬ ಪ್ರಶ್ನೆಗೆ ಹಿರಿಯರೊಬ್ಬರು ಉತ್ತರಿಸಿದರಂತೆ 'ಹಿಂದೂಧರ್ಮ ವರ್ಣಿಸಲಾಗದಷ್ಟು ಸುಂದರ, ಸೂಕ್ಷ್ಮ' - ವಾಸ್ತವವಾಗಿ ಈ ಉತ್ತರ ತುಂಬ ಅರ್ಥಗರ್ಭಿತ

ಹಿಂದೂಧರ್ಮವನ್ನು ತಿಳಿಯಲು, ಅಳೆಯಲು ಇದುವರೆಗೆ ಮಾಡಿದ ಪ್ರಯತ್ನಗಳೆಲ್ಲ ಒಂದು ಅರ್ಥದಲ್ಲಿ ಅಪೂರ್ಣವೆ ಏಕೆಂದರೆ ಹಿಂದೂಧರ್ಮ ಯಾವ ಮೌಲ್ಯಮಾಪನಕ್ಕೂ ನಿಲುಕದಷ್ಟು ವಿಶಾಲವಾದುದು ನಂಬಿಕೆಯಲ್ಲಿ, ನಡವಳಿಕೆಯಲ್ಲಿ, ವ್ಯಕ್ತಿವಿಕಾಸದಲ್ಲಿ, ಸಾಮಾಜಿಕ ಹಿತಾಸಕ್ತಿಗಳಲ್ಲಿ, ಧಾರ್ಮಿಕ - ರಾಜಕೀಯ ದೃಷ್ಟಿಕೋನದಲ್ಲಿ - ಹೀಗೆ ಯಾವ ಮುಖದಿಂದ ಹಿಂದೂಧರ್ಮವನ್ನು ಅರಿಯಲು, ಅಳೆಯಲು ಯತ್ನಿಸಿದರೂ ಮಾನವನ ಅರಿವಿನ ಶಕ್ತಿಯೇ ಮಿತವಾಗಿ, ಧರ್ಮದ ವ್ಯಾಪಕತೆ ದೊಡ್ಡದಾಗಿ ನಮಗೆ ಕಂಡುಬರುತ್ತದೆ

ಉದಾಹರಣೆಗೆ ಮಾನವನಿಗೆ ಅತ್ಯಂತ ಅವಶ್ಯಕವೂ, ಪ್ರಿಯವೂ ಆದ ದೇವರ ಕುರಿತಾದ ನಂಬಿಕೆಯನ್ನೇ ನೋಡೋಣ ದೇವರು ಏನು? ಹೇಗೆ? - ಎಂಬ ಕುರಿತು ಹಿಂದೂಧರ್ಮದ ವಿಚಾರ ಏನು? ಎಂದು ಕೇಳಿದರೆ 'ಅವರವರ ಬುದ್ಧಿ - ಭಾವನೆಗಳಿಗೆ ತಕ್ಕಂತೆ ಈ ದೇವರ ಕಲ್ಪನೆ, ಆಸ್ತಿಕನಿಗೆ ಉಂಟು, ನಾಸ್ತಿಕನಿಗೆ ಇಲ್ಲ' - ಎಂದು ಹೇಳಬೇಕಾಗುತ್ತದೆ ಈ ಉತ್ತರ ತುಂಬ ವಿಶಾಲ ಮತ್ತು ವ್ಯಾಪಕ ಹೀಗೆ ನಮ್ಮಿಂದ ಹೊರಟ ಪ್ರಶ್ನೆಗಳೆಲ್ಲ ಹಿಂದೆ ಬಂದು ಆ ನಿಗೂಢತೆ ಹಾಗೆಯೇ ಉಳಿಯುತ್ತದೆ, ಎಲ್ಲ ಕಾಲಕ್ಕೂ, ಎಲ್ಲ ಬಗೆಯ ಜನರಿಗೂ ಅನ್ವಯವಾಗಬಲ್ಲ ಧರ್ಮ - ಹಿಂದೂ ಧರ್ಮ, ಎಂಬುದು ಅರ್ಥವಾಗುತ್ತದೆ

ಈ ಹಿಂದೂಧರ್ಮ ಯಾವನೋ ಒಬ್ಬ ವ್ಯಕ್ತಿಯ ಪ್ರತಿಭೆಯಿಂದ ಹೊರಬಂದುದಲ್ಲ, ಯಾವುದೋ ಒಂದು ಗ್ರಂಥವೇ ಸರಿಯೆಂದು ನಂಬಿ ಕೂತದ್ದಲ್ಲ, ಯಾವುದೋ ಒಂದು ಪೂಜಾಕ್ರಮವೇ ಸರ್ವಸಜ್ಜನರ ಹೊಸ ಸೃಷ್ಟಿಯೂ ಅಲ್ಲ ಅದೊಂದು ವಿಶೇಷವಾದ ದೃಷ್ಟಿ, ಜೀವನ ಕುರಿತಾದ ಈ ವಿಶೇಷ ದೃಷ್ಟಿಯನ್ನೇ ಹಿಂದೂಧರ್ಮವೆಂದು ಹೆಸರಿಸಿದ್ದೇವೆ

ಈ ಹಿಂದೂಧರ್ಮ ಜಗತ್ತಿನ ಇತರ ಎಲ್ಲ ಧರ್ಮಗಳನ್ನೂ ಸ್ವಾಗತಿಸಿದ, ಅವುಗಳಲ್ಲಿ ಸಮನ್ವಯವನ್ನು ಸಾಧಿಸಲು ಪ್ರಯತ್ನಿಸಿದೆ ಕನ್ನಡದ ಕವಿಯೊಬ್ಬರು ಹಾಡಿದ ಹಾಗೆ-

ಎಲ್ಲರೂ ಬರಲೆಂದು ಸ್ವಾಗತಿಸಿದೆ
ಜಾತಿ - ಮತ ದೇರೆನದೆ,
ಬಣ್ಣ-ನುಡಿ ಬದಲೆನದೆ
ಭೇದವೆಣಿಸದೆ ತಾಯೆ ನೀ ಸಲಹಿದೆ

ವಿಶ್ವಸಂತತಿಯೆಲ್ಲ ನಿನ್ನ ಪುಣ್ಯೋದರದ
ಹಸುಗೂಸುಗಳು ಎಂದು ಹಾಲುಣಿಸಿದೆ
ಒಂದೆ ತೊಟ್ಟಿಲೊಳಿಟ್ಟು ತೂಗಿ ಜೋಗುಳ
ಪ್ರೇಮ ಸಂಗೀತದೊಳು ಮೈಮರೆಸಿದೆ

ಹೀಗೆ ಜಗತ್ತಿನ ಎಲ್ಲ ಧರ್ಮಗಳನ್ನೂ ಸ್ವಾಗತಿಸಿ, ಅವುಗಳಲ್ಲಿರುವ ಉತ್ತಮವಾದ ಅಂಶಗಳನ್ನು ಹೀರಿ, ಅವುಗಳ ಮೇಲೆ ತನ್ನ ಪ್ರಭಾವ ಬೀರಿ, 'ವಸುಧೈವ ಕುಟುಂಬಕಮ್' ಎಂಬ ಭಾವನೆಗೆ ಇಂಬುಕೊಟ್ಟ ಧರ್ಮ, ಹಿಂದೂಧರ್ಮ

ಹಿಂದೂಧರ್ಮದಲ್ಲಿ ಆಸ್ತಿಕನೂ ಇರಬಲ್ಲ, ನಾಸ್ತಿಕನೂ ಇರಬಲ್ಲ ವಿಗ್ರಹ ಪೂಜಕನೂ ಇರಬಲ್ಲ, ಅದನ್ನು ವಿರೋಧಿಸುವವನೂ ಇರಬಲ್ಲ ಬಹುಶಃ ಹಿಂದೂಧರ್ಮ ತನ್ನ ಅನುಯಾಯಿಗಳಿಗೆ ಕೊಟ್ಟಷ್ಟು ಸ್ವಾತಂತ್ರ್ಯವನ್ನು ಜಗತ್ತಿನ ಇತರ ಯಾವ ಧರ್ಮವೂ ಅದರ ಅನುಯಾಯಿಗಳಿಗೆ ನೀಡಿರಲಾರದು ಈ ಭಾವನ ಹರಿಹರದೇವನ ಕಾಲದ ದೇಲೂರು ಶಿಲಾಶಾಸನದ ಶ್ಲೋಕಗಳಲ್ಲಿ ಬಹಳ ಚನ್ನಾಗಿ ಮೂಡಿಬಂದಿದ ಆ ಶ್ಲೋಕಗಳು ಹೀಗಿವ-

ಶ್ರೀಮತ್ ತ್ರೈಲೋಕ್ಯಪೂಜ್ಯಾಯ
ಸರ್ವಕರ್ಮ ಸು ಸಾಕ್ಷಿಣೇ
ಫಲದಾಯ ನಮೋ ನಿತ್ಯಂ
ಕೇಶವಾಯ ಶಿವಾಯ ಚ
ಯಂ ಶೈವಾಃ ಸಮುಪಾಸತೇ
ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
ಕರ್ತೇತಿ ನ್ಯಯಾಯಿಕಾಃ
ಅರ್ಹನ್ನಿತ್ಯಥ ಜೈನ ಶಾಸನರತಾಃ
ಕರ್ಮೇತಿ ಮೀಮಾಂಸಕಾಃ
ಸೋsಯಂ ವೋ ವಿಧಧಾತು
ವಾಂಛಿತ ಫಲಂ ಶ್ರೀಕೇಶವಸ್ಸರ್ವದಾ

ಈ ಶ್ಲೋಕದಲ್ಲಿ 'ಕೇಶವಾಯ ಶಿವಾಯ ಚ' - ಎಂದು ಕೇಶವನಿಗೂ, ಶಿವನಿಗೂ ಒಟ್ಟಿಗೆ ನಮಸ್ಕಾರ ಹೇಳಿದೆ ಶಿವ - ವಿಷ್ಣು ಇಬ್ಬರೂ ಸಮಾನರು, ಇಬ್ಬರೂ ಎಲ್ಲ ಪ್ರಕಾರವಾಗಿಯೂ ಸ್ತೋತ್ರಾರ್ಹರು - ಎಂದು ಹೇಳಿ ಶೈವ-ವೈಷ್ಣವ ಮತಗಳ ಸಾಮರಸ್ಯವನ್ನು ಸೂಚಿಸಿದೆ ಇನ್ನೂ ಮುಂದೆ ಹೋಗಿ ವೈದಿಕ ಮತ್ತು ಅವೈದಿಕ ಅಥವಾ ಆಸ್ತಿಕ ಮತ್ತು ನಾಸ್ತಿಕ ಮತಗಳ ಸಮನ್ವಯವನ್ನು ಸಾಧಿಸಿದೆ ಯಾರನ್ನು ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮವೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣಪಟುಗಳಾದ ನೈಯಾಯಿಕರು ಕರ್ತನೆಂದೂ, ಜೈನರು ಅರ್ಹನ್ ಎಂದೂ, ಮೀಮಾಂಸಕರು ಕರ್ಮವೆಂದೂ ಉಪಾಸಿಸುತ್ತಾರೋ, ಅಂತಹ ಆ ಕೇಶವನು ಸದಾ ನಮ್ಮ ಬಯಕೆಯನ್ನು ಈಡೇರಿಸಲಿ - ಎಂದು ಹೇಳುವ ಈ ಶ್ಲೋಕ ಹಿಂದೂಧರ್ಮದ ಸಮನ್ವಯ ದೃಷ್ಟಿಯನ್ನು ಬಹಳ ಸೊಗಸಾಗಿ ನಿರೂಪಿಸಿದೆ

ಹಿಂದೂಧರ್ಮದಲ್ಲಿ ಈ ರೀತಿಯ ಸಮನ್ವಯ ಭಾವನೆ ಹೇಗೆ ಬಂತು - ಎಂದರೆ ಉತ್ತರ ಇಷ್ಟು ಹಿಂದೂಧರ್ಮ ಯಾವುದೇ ಒಂದು ಪದ್ಧತಿ, ಒಂದು ರೂಢಿ, ಒಂದು ಅಭಿಪ್ರಾಯವನ್ನು ನಂಬಿ ನಿಂತಿಲ್ಲ ಮನುಷ್ಯನ ಸ್ವಭಾವ ಬಹುವಿಧ ಅದಕ್ಕೆ ತಕ್ಕಂತೆ ವ್ಯವಸ್ಥೆಗಳು, ರೂಢಿಗಳು, ಆದ್ದರಿಂದ ಯಾವುದನ್ನೂ ದೂರಬಾರದು, ದೂರ ಇಡಬಾರದು ಪ್ರತಿಯೊಂದು ನೀತಿ - ನಡವಳಿಕೆಯನ್ನು ಸಹಾನುಭೂತಿಯಿಂದ



ನೋಡಿ, ವಿಮರ್ಶಿಸಿ ಅಂಗೀಕರಿಸಬೇಕು ಅಕಸ್ಮಾತ್ ಅಂಗೀಕರಿಸಲು ಅಸಾಧ್ಯವೆನಿಸಿದರೆ ಬಹಿಷ್ಕಾರ ಹಾಕದೆ ಅದರ ಪಾಡಿಗೆ ಅದನ್ನು ಗೌರವದಿಂದ ಇರಲು ಬಿಡಬೇಕು - ಇದು ಹಿಂದೂಧರ್ಮದ ನಿಲುವು

ಪರಂಪರಾಗತವಾದ ರೂಢಿಗೆ ಕಟ್ಟುಬೀಳದೆ, ಬದಲಾವಣೆಯನ್ನು ವಿಕಾಸವನ್ನು ಬಯಸುವುದು ಹಿಂದೂಧರ್ಮದ ಇನ್ನೊಂದು ಮುಖ ಆದರೆ ಈ ಬದಲಾವಣೆ ಸ್ವಾಭಾವಿಕವಾಗಿರಬೇಕು, ಸಹಜವಾಗಿರಬೇಕು ಹೊರಗಿನವರು ಒತ್ತಾಯದಿಂದ ಹೇರಿದುದು ಆಗಿರಬಾರದು ಸದಾ ಗತಿಶೀಲವೂ, ಪ್ರಗತಿಪರವೂ ಆದ ಮನೋಭಾವ ಇದು ಹಿಂದೂಧರ್ಮ ಕಾಲ-ಕಾಲಕ್ಕೆ ತಕ್ಕಂತೆ ಜೀವನದ ಮೂಲ ನಂಬಿಕೆಗಳನ್ನು ಬಿಡದೆ, ಎಲ್ಲ ರೀತಿಯ ಪರಿವರ್ತನೆಗಳನ್ನು ರೂಪಿಸಿದೆ.

ಈ ಧರ್ಮವನ್ನು ಒಪ್ಪಿ ನಡೆದ ಹಿಂದೂ ಸಮಾಜದಲ್ಲಿ ಎಲ್ಲ ಕಾಲದಲ್ಲೂ ಪ್ರಗತಿಪರರು, ಸುಧಾರಕರು - ಎಂಬ ಒಂದು ಗುಂಪು ಇದ್ದೇ ಇತ್ತು ಎಲ್ಲ ಸಮಾಜಗಳಲ್ಲೂ ಅಂತಹ ಗುಂಪು ಇರುತ್ತದೆ. ಆದರೆ ಒಂದು ವ್ಯತ್ಯಾಸ. ಇಲ್ಲಿ ಅಂತಹವರು ಪ್ರಾಮಾಣಿಕರೂ, ಸಮಾಜನಿಷ್ಠರೂ ಆಗಿದ್ದುದರಿಂದ ಅವರನ್ನು ವಿರೋಧಿಸಿ, ವಿಧ್ವಂಸಕ ರೀತಿಯಲ್ಲಿ ನಮ್ಮ ರೂಢಿ - ಸಂಪ್ರದಾಯಗಳನ್ನು ಯಾರೂ ನಾಶಮಾಡಲಿಲ್ಲ, ಬದಲಿಗೆ ಅವರನ್ನು 'ಋಷಿಗಳು' ಎಂದು ಗೌರವಿಸಿದರು ಹಾಗಾಗಿ ವೇದಗಳನ್ನು ವಿರೋಧಿಸಿದ ಚಾರ್ವಾಕ ಋಷಿಯಾದ, ದೇವರನ್ನು ಧಿಕ್ಕರಿಸಿದ ಬುದ್ಧ ಭಗವಂತನಾದ ನಮ್ಮ ದರ್ಶನ ಶಾಸ್ತ್ರಗಳ ಶ್ರೇಣಿಯಲ್ಲಿ ಇವರ ಸಿದ್ಧಾಂತಕ್ಕೂ ಮಾನ್ಯತೆ ನೀಡಿದರು

ಪ್ರಗತಿಪರರು, ಸುಧಾರಕರು ಸೂಚಿಸಿದ ಬದಲಾವಣೆಗಳನ್ನು ಸಮಾಜ ಕ್ರಮಶಃ ಒಪ್ಪಿ ಸ್ವೀಕರಿಸಿತು ಇದಕ್ಕಾಗಿ ಹೋರಾಟ - ಹೊಡೆದಾಟ ನಡೆಯಲಿಲ್ಲ, ರಕ್ತಪಾತ ಆಗಲಿಲ್ಲ. ಎಲ್ಲವೂ ಚರ್ಚೆಯ ಮಟ್ಟದಲ್ಲಿ, ವಿಚಾರದ ಮಟ್ಟದಲ್ಲಿ ವಿಮರ್ಶಿಸಲ್ಪಡಬೇಕು, ಯೋಗ್ಯವಾದುದನ್ನು ಪ್ರಾಜ್ಞರೂ, ಸಮದರ್ಶಿಗಳೂ ಆದ ಹಿರಿಯರು ನಿರ್ಣಯಿಸಿ ಹೇಳುತ್ತಾರೆ ಅವರೇ ಸ್ಮೃತಿಕಾರರು ಅವರ ಮಾತು ಆ ಕಾಲಕ್ಕೆ ಸರ್ವಮಾನ್ಯ ಹಾಗಾಗಿ ಹಿಂದೂ ಸಮಾಜದಲ್ಲಿ ಇಷ್ಟೆಲ್ಲ ಬದಲಾವಣೆಗಳು, ಪರಿವರ್ತನೆಗಳು ವಿಶೇಷ ಗೊಂದಲ ಇಲ್ಲದೆ ಆಗಿಹೋಗಿವೆ, ಆಗುತ್ತಿವೆ ಇತ್ತೀಚೆಗೆ ನಮ್ಮ ಸಮಾಜದಲ್ಲಿ ನೂರಾರು - ಸಾವಿರಾರು ಕುಟುಂಬಗಳು ನಂಬಿ ನಡೆದು ಬಂದಿದ್ದ ಅಳಿಯಕಟ್ಟು, ಕೇರಳದ ಮರುಮಕ್ಕತ್ತಾಯಂ ಪದ್ಧತಿ ಮುಕ್ತಾಯವಾಯಿತು ಇದಕ್ಕಾಗಿ ದೊಡ್ಡ ಹೋರಾಟ ಆಗಿಲ್ಲ; ರಕ್ತಪಾತ ನಡೆಯಲಿಲ್ಲ ಸಮಾಜವೇ ಅದನ್ನೊಪ್ಪಿ ನಡೆಯುತ್ತಿದೆ ಹೀಗೆ ಸಮಾಜವು ಕಾಲಬಾಹ್ಯವಾದ, out Dated ಆದ ರೂಢಿ - ಸಂಪ್ರದಾಯಗಳನ್ನು ಬಿಟ್ಟು ಯೋಗ್ಯ ಬದಲಾವಣೆಗಳನ್ನು ರೂಪಿಸಬೇಕು - ಎಂಬುದು ಸರ್ವಮಾನ್ಯವಾದ ಹಿಂದೂ ದೃಷ್ಟಿ. 'ತಾತಸ್ಯ ಕೂಪೋಽಯಮಿತಿ ಬ್ರುವಾಣಾಃ ಕ್ಷಾರಂ ಜಲಂ ಕಾಪುರುಷಾಃ ಪಿಬಂತಿ' -ಅಪ್ಪತೋಡಿಸಿದ ಬಾವಿ ಎಂದು ಉಪ್ಪುನೀರನ್ನೇ ಕುಡಿಯುವವರನ್ನು ಮೂರ್ಖರು ಅಂದಿದ್ದಾರೆ

ಇದರ ಪರಿಣಾಮವಾಗಿ ಇಲ್ಲಿ ಎಲ್ಲ ರೀತಿಯ ಜನ, ಬಗೆ - ಬಗೆಯ ದೇವರು, ಬಗೆ - ಬಗೆಯ ಭಾಷೆ - ವೇಷಗಳು, ನಾನಾರೀತಿಯ ಕಟ್ಟು - ಕಟ್ಟಳೆಗಳು ತುಂಬಿಕೊಂಡಿವೆ ಎಲ್ಲ ಕಾಲದ ಎಲ್ಲ ಜನರಿಗೂ ಒಂದೇ ಆಕೃತಿ, ಒಂದೇ ವ್ಯವಸ್ಥೆ ತರುವ ರೂಢಿ ಇಲ್ಲಿಲ್ಲ, ಒತ್ತಾಯವೂ ಇಲ್ಲ ಅದನ್ನೇ ನಮ್ಮ ಧರ್ಮಗ್ರಂಥಗಳು ತುಂಬ ಸುಂದರವಾಗಿ ಹೇಳಿವೆ-

ಶ್ರುತಿರ್ವಿಭಿನ್ನಾಃ ಸ್ಮೃತಯೋ ವಿಭಿನ್ನಾಃ
ನೈಕೋ ಋಷೀ ಯಸ್ಯಮತಂ ಪ್ರಮಾಣಂ
ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಮಾಂ
ಮಹಾಜನೋ ಯೇನ ಗತಃ ಸ ಪಂಥಾಃ

ಅಂದರೆ ವೇದಗಳು ಅನೇಕ ನಡವಳಿಕೆಯ ಸೂತ್ರಗಳೂ ಹಲವಾರು ಯಾವನೋ ಒಬ್ಬ ಋಷಿಯ ವಾಕ್ಯವೇ ಪ್ರಮಾಣ ಎನ್ನುವಂತಿಲ್ಲ ಆದ್ದರಿಂದ ಉತ್ತಮರು ನಡೆದ ದಾರಿಯಲ್ಲಿ ಸಾಗುವುದೇ ಯೋಗ್ಯ - ಎಂಬುದು ಹಿಂದೂಧರ್ಮದ ಖಚಿತ ಅಭಿಪ್ರಾಯ

ಹಿಂದೂಧರ್ಮ ಸಹಿಷ್ಣು ಧರ್ಮ ಮಾತ್ರವಲ್ಲ, ಸರ್ವಧರ್ಮ ಸಮಾದರಭಾವವುಳ್ಳ ಧರ್ಮ ಇದು ಯಾರನ್ನೂ ನಾಶಮಾಡದೆ, ನಾಶಮಾಡಲು ಬಿಡದೆ ಎಲ್ಲರೂ ಅವರವರ ಪ್ರಕೃತಿಗೆ ತಕ್ಕಂತೆ ಬದುಕಲು ಬಿಡುವ, ಬೆಳೆಯಲು ಬಿಡುವ ವಿಶಿಷ್ಟದಾರಿಯನ್ನು ರೂಪಿಸಿದೆ

ಈ ಸರ್ವ ಸಮಾದರಭಾವದ ಮುಂದಿನ ಹೆಜ್ಜೆಯೇ 'ಎಲ್ಲರೂ ಮುಂದೆ ಬರಬೇಕು, ಬೆಳೆಯ ಬೇಕು, ಸುಖವಾಗಿರಬೇಕು' -

ಸರ್ವೇ ಭವಂತು ಸುಖಿನಃ
ಸರ್ವೇ ಸಂತು ನಿರಾಮಯಾಃ
ಸರ್ವೇ ಭದ್ರಾಣಿ ಪಶ್ಯಂತು
ಮಾಕಶ್ಚಿದ್ ದುಃಖ ಭಾಗ್ಭವೇತ್
ಲೋಕಾಸ್ಸಮಸ್ತಾಃ ಸುಖಿನೋಭವಂತು

- ಎಂಬ ಮನೋಭಿಲಾಷೆ ಮಾನವ ಕೇವಲ ಪಶು ಅಲ್ಲ, ಪಾಪಿಯೂ ಅಲ್ಲ, ಅವನೊಬ್ಬ ದೈವೀ ಶಿಶು ದೈವೀ ಅಂಶ ಅವನಲ್ಲಿದೆ ಅದನ್ನು ಜಾಗೃತಗೊಳಿಸಿದಾಗ ಅವನು ಜಗದ್ವಂದ್ಯನಾಗುತ್ತಾನೆ ನರನು ನಾರಾಯಣನಾಗಬಲ್ಲ; ಜೀವನು ಶಿವಭಾವ ಹೊಂದಲು ಸಾಧ್ಯ. ಆ ರೀತಿ ಪ್ರತಿ ವ್ಯಕ್ತಿಯೂ ತಾನಿರುವ ಸ್ಥಿತಿಯಿಂದ ಭೌತಿಕವಾಗಿ, ಬೌದ್ಧಿಕವಾಗಿ, ಮಾನಸಿಕವಾಗಿ ಮೇಲೇರಬೇಕು ಇದನ್ನು ಹಿಂದೂಧರ್ಮ ತನ್ನ ಹೊಣೆಯಾಗಿ ಸ್ವೀಕರಿಸಿ 'ಕೃಣ್ವನ್ತೋ ವಿಶ್ವಮಾರ್ಯಮ್' ಎಂದು ಸಾರಿತು ಜಗತ್ತಿನ ಜನರನ್ನೆಲ್ಲ ಆರ್ಯರನ್ನಾಗಿ, ಶ್ರೇಷ್ಠ ಸಜ್ಜನರನ್ನಾಗಿ, ಗುಣಶೀಲ - ಗುಣಗ್ರಾಹಿಗಳನ್ನಾಗಿ ಮಾಡುವ ಹೊಣೆಯನ್ನು

ಸ್ವೀಕರಿಸಿತು ಅದಕ್ಕಾಗಿಯೇ ಹಿಂದೂಧರ್ಮದ ಪ್ರಕಾರ ಜಗತ್ತಿನಲ್ಲಿ ಮಾನವನ ಯಾತ್ರೆ ಅಸತ್ಯದಿಂದ ಸತ್ಯದ ಕಡೆಗೆ ಮಾತ್ರವಲ್ಲ, ಒಂದು ಸತ್ಯದಿಂದ ಇನ್ನೊಂದು ಹೆಚ್ಚಿನ ಸತ್ಯದ ಕಡೆಗೆ

ಪ್ರತಿಯೊಬ್ಬ ವ್ಯಕ್ತಿಯೂ ಸಂಸ್ಕಾರ ಸಂಪನ್ನನಾಗಬೇಕು. ಸುಸಂಸ್ಕೃತನಾಗಬೇಕು - ಎಂಬುದು ಹಿಂದೂಧರ್ಮದ ಆಶಯ ಕುಟುಂಬವು ಇಂತಹ ಸಂಸ್ಕಾರ ನೀಡುವ ಮೊದಲ ಸಂಸ್ಥೆ ಅಲ್ಲಿನ ಸಂಬಂಧಗಳು, ಪರಸ್ಪರ ಅವಲಂಬನೆಗಳು 'ಕುಟುಂಬದಿಂದ ಸಂರಕ್ಷಣೆ ಪಡೆದ ವ್ಯಕ್ತಿ ಆ ಕುಟುಂಬದ ಎಲ್ಲರ ಒಳಿತಿಗಾಗಿ ದುಡಿಯಬೇಕು' ಎಂಬ ಮನೋಭಾವ ತಾಳುವಂತೆ ಮಾಡುತ್ತದೆ. ಅದರ ಫಲವಾಗಿ ಕುಟುಂಬದ ಎಲ್ಲರ ಹಿತಕ್ಕಾಗಿ ತನ್ನ ಸುಖವನ್ನು ಸ್ವಲ್ಪ ಕಡಿಮೆ ಮಾಡಿಕೊಳ್ಳುವ, ಕೆಲವೊಮ್ಮೆ ಎಲ್ಲ ಸುಖವನ್ನೂ ಬಿಟ್ಟುಕೊಡುವ ಸ್ವಭಾವ ಬೆಳೆಯುತ್ತದೆ ಯಾರದೋ ಒತ್ತಾಯದ ಮೂಲಕ ಅಲ್ಲ, ಸ್ವಂತ ಇಚ್ಛೆಯಿಂದಲೇ ಸ್ವಾರ್ಥವನ್ನು ದೂರ ಇಡುವ ಪ್ರವೃತ್ತಿ ಇದು ಇದನ್ನೇ 'ತ್ಯಾಗ' ಎನ್ನುತ್ತಾರೆ.

ಈ ತ್ಯಾಗ ಸಂಸ್ಕಾರ ವ್ಯಕ್ತಿ - ಕುಟುಂಬಗಳ ನಡುವೆ ಮಾತ್ರವಲ್ಲ, ಅದು ಇನ್ನೂ ಮುಂದುವರೆದಿದೆ ವ್ಯಕ್ತಿಯಿಂದ ಕುಟುಂಬ - ಕುಟುಂಬದಿಂದ ಗ್ರಾಮ - ಗ್ರಾಮಗಳಿಂದ ದೇಶ - ದೇಶದಿಂದ ಜಗತ್ತು - ಜಗತ್ತಿನಿಂದ ಪರಮಾತ್ಮ ಒಂದಕ್ಕಿಂತ ಮತ್ತೊಂದು ದೊಡ್ಡದು ದೊಡ್ಡದರ ಹಿತಕ್ಕಾಗಿ ಸಣ್ಣದನ್ನು ತ್ಯಾಗ ಮಾಡಬೇಕು ಆಗಲೇ ಸುಖ; ಕಡಿಮೆ ಗೊಂದಲ ಅದು ವಿರುದ್ಧವಾದಾಗ ಯಾರಿಗೂ ಸುಖವಿಲ್ಲ ಗೊಂದಲ ಜಾಸ್ತಿ. ಸಾಮಾನ್ಯವಾಗಿ ಪರಿಸರದ ಪ್ರಜ್ಞೆ ಇರುವ ಎಲ್ಲ ಸಮಾಜಗಳೂ ಈ ವಿಷಯವನ್ನು ಒಪ್ಪುತ್ತವೆ

'ತ್ಯಜೇದೇಕಂ ಕುಲಸ್ಯಾರ್ಥೇ
ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್,
ಗ್ರಾಮಂ ಜನಪದಸ್ಯಾರ್ಥೇ
ಆತ್ಮಾರ್ಥೇ ಪೃಥಿವೀಂ ತ್ಯಜೇತ್'

ಅಂದರೆ ಕುಲದ ಹಿತಕ್ಕಾಗಿ ಒಬ್ಬನನ್ನು, ಗ್ರಾಮಕ್ಕಾಗಿ ಕುಲವನ್ನು, ದೇಶಕ್ಕಾಗಿ ಗ್ರಾಮವನ್ನು, ಪರಮಾತ್ಮನಿಗಾಗಿ ಪ್ರಪಂಚವನ್ನು ಬಿಡಬೇಕು - ಎಂಬುದು ಹಿಂದೂಧರ್ಮದ ನಿಲುವು.

ಕುಟುಂಬವು ಸಂಸ್ಕಾರ ನೀಡುವ ಸಂಸ್ಥೆಯಾಗಿರುವಂತೆ ಹಿಂದೂ ದೇವಸ್ಥಾನಗಳೂ, ಮಠಗಳೂ, ವಿದ್ಯಾಲಯಗಳೂ ಇದೇ ಸಮೂಹ ಹಿತದ ಶಿಕ್ಷಣವನ್ನು ನೀಡುವ ಕೇಂದ್ರಗಳು. ಎಲ್ಲೆಡೆ ಒಂದೇ ಗುರಿ ಹಬ್ಬಗಳು, ವಿವರಣೆಗಳು ಮಾತ್ರ ಬೇರೆ - ಬೇರೆ. ವಿದ್ಯಾಲಯಗಳಲ್ಲಿ, ಮಠಗಳಲ್ಲಿ 'ಕೃಣ್ವಂತೋ ವಿಶ್ವಮಾರ್ಯಂ', 'ವಸುಧೈವ ಕುಟುಂಬಕಂ', 'ಸ್ವದೇಶೋ ಭುವನತ್ರಯಂ' ಎಂದು ತಿಳಿಸಿ, ಚರ್ಚಿಸಿ, ಒಪ್ಪಿಸಿ ಜಗತ್ತಿನ ಹಿತಕ್ಕಾಗಿ ವ್ಯಕ್ತಿಯನ್ನು ಸಿದ್ಧಗೊಳಿಸಿದರೆ, ದೇವಸ್ಥಾನಗಳಲ್ಲಿ 'ಸರ್ವೇಜನಾಃ ಸುಖಿನೋ ಭವಂತು', 'ಸಮಸ್ತ ಸನ್ಮಂಗಳಾಗಿ ಭವಂತು' - ಎಂಬ ಪ್ರಾರ್ಥನೆಗಳ ಮೂಲಕ ಮನಸ್ಸಿನಲ್ಲಿ ಈ ಸಂಸ್ಕಾರವನ್ನು ರೂಪಿಸಲಾಗುತ್ತದೆ

ಇಂತಹ ಸಂಸ್ಕಾರ ಸಂಪನ್ನರಾದ ಉದಾತ್ತ ವ್ಯಕ್ತಿಗಳು, ಅರ್ಜಿತರನ್ನೂ, ಶತ್ರುಗಳನ್ನೂ ತಮ್ಮ ಗುಣಶೀಲಗಳಿಂದ ಗೆಲ್ಲಬಲ್ಲ ವ್ಯಕ್ತಿಗಳು ನಿರ್ಮಾಣ ಆಗಬೇಕೆಂಬುದೇ ಹಿಂದೂಧರ್ಮದ ಸಮಾಜ ವ್ಯವಸ್ಥೆಯ ಮುಖ್ಯ ಉದ್ದೇಶ ಅದಕ್ಕಾಗಿ ಎರಡು ರೀತಿಯ ಸಂಬಂಧಗಳನ್ನು ಅವು ಮೂಡಿಸಿತು ಒಂದು ವ್ಯಕ್ತಿ - ವ್ಯಕ್ತಿಗಳ ನಡುವಿನ ಸಂಬಂಧ, ಎರಡು ಸ್ತ್ರೀಯರ ಕುರಿತಾಗಿ ಚಿಂತಿಸುವ, ನಡೆದುಕೊಳ್ಳುವ ರೀತಿ

ವ್ಯಕ್ತಿ ಪರಮಾತ್ಮನ ಅಂಶ - ಎಂದು ಹೇಳಿರುವಂತೆ ಸಮಾಜವೇ ಪರಮಾತ್ಮ ವ್ಯಕ್ತಿಗಳೆಲ್ಲ ಈ ಸಮಾಜಪುರುಷನ ಅಂಗಗಳು ಎಲ್ಲ ಅಂಗಗಳೂ ಸ್ವರೂಪದಲ್ಲಿ, ಕಾರ್ಯದಲ್ಲಿ, ಶಕ್ತಿಯಲ್ಲಿ ಭಿನ್ನವಾಗಿದ್ದರೂ ಎಲ್ಲವೂ ಈ ಶರೀರದ ಭಾಗಗಳು ಯಾವುದೂ ಹೆಚ್ಚಲ್ಲ, ಕಡಿಮೆಯಲ್ಲ ಪರಮಾತ್ಮನ ಸಮಸ್ತ ಅಂಗಗಳೂ ಪವಿತ್ರವೇ ನಾವೆಲ್ಲ ನಮಸ್ಕರಿಸುವುದು ಪರಮಾತ್ಮನ ಕಾಲುಗಳಿಗೆ, ಅದು ಕೀಳಲ್ಲ ಸರ್ವರನ್ನೂ ಸಮಾನವಾಗಿ ನೋಡುವುದೇ ಯೋಗ್ಯ ದೃಷ್ಟಿ ಅಂತವರನ್ನೇ ಪಂಡಿತ, ಜ್ಞಾನಿ ಎನ್ನುವುದು ಗೀತೆಯಲ್ಲಿ ಇದನ್ನು ಸ್ಪಷ್ಟವಾಗಿ ಹೇಳಿದೆ

ವಿದ್ಯಾವಿನಯ ಸಂಪನ್ನೇ
ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವಪಾಕೇ ಚ
ಪಂಡಿತಾಃ ಸಮದರ್ಶಿನಃ

'ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣ, ಗೋವು, ಆನೆ, ನಾಯಿ - ಈ ಎಲ್ಲರನ್ನೂ ಪಂಡಿತನು ಸಮಭಾವದಿಂದ ನೋಡುತ್ತಾನೆ'

ಹಿಂದೂಧರ್ಮವನ್ನು ಸರಿಯಾಗಿ ತಿಳಿದವರು ಯಾವ ಜಾತಿಯನ್ನೂ ಹೀಗಳೆಯುವುದಿಲ್ಲ. ಬದಲಾದ ಪ್ರತಿಯೊಂದು ಕುಲ, ಪ್ರತಿಯೊಂದು ಕಸುಬು ಸಮಾಜಕ್ಕೆ ಅವಶ್ಯಕ; ಅನಿವಾರ್ಯ ಎಂಬ ಪ್ರಜ್ಞೆ ಇರಿಸಿಕೊಂಡೇ ಅವರು ವ್ಯವಹರಿಸುತ್ತಾರೆ ಹಿಂದೂಗಳ ಪ್ರಮುಖ ಪೂಜಾಮಂತ್ರವಾದ 'ಶ್ರೀರುದ್ರ' ಇಂತಹ ವಿರಾಟ್‌ಪುರುಷನ ಸ್ತುತಿ - ನಮನಗಳ ಸಂಕೇತ ಸಮಾಜಪುರುಷನನ್ನು 'ರುದ್ರ' ಎಂದು ಕರೆದು, ಎಲ್ಲ ಉದ್ಯೋಗಗಳನ್ನೂ ಗುರುತಿಸಿ, ಗೌರವಿಸುವ ಔದಾರ್ಯ ತೋರಿಸಿದೆ ಎಲ್ಲ ಕಸುಬುಗಳವರನ್ನು ನಮಸ್ಕರಿಸಿದೆ. ಇವರೆಲ್ಲ ಭಗವಂತನ ನಾನಾರೂಪಗಳು ಕೆಲವೊಮ್ಮೆ ಸೌಮ್ಯ, ಕೆಲವೊಮ್ಮೆ ರೌದ್ರ. ಆದರೆ ಯಾವುದೂ ಅಲ್ಪವಲ್ಲ, ನಿಂದನೀಯವಲ್ಲ - ಎಂಬ ಏಕಾತ್ಮತೆಯ ಭಾವವನ್ನು ಇಲ್ಲಿ ಕಾಣಬಹುದು

ಹಿಂದೂಧರ್ಮದ ಸರ್ವಶ್ರೇಷ್ಠತೆಯ ಉತ್ತಮ ಉದಾಹರಣೆ ಸ್ತ್ರೀಯರ ಕುರಿತಾಗಿ ಅದು ಬೆಳೆಸಿಕೊಂಡು ಬಂದಿರುವ ದೃಷ್ಟಿಕೋನ, ಸ್ತ್ರೀಯರನ್ನೆಲ್ಲ 'ತಾಯಿ' ಎಂದು ಕಾಣುತ್ತ ಬೆಳೆಯುವ ವಿವೇಕ 'ನ ಮಾತುಃ ಪರದೈವತಂ' - ತಾಯಿಗಿಂತ ಶ್ರೇಷ್ಠ ದೇವರಿಲ್ಲ, 'ಮಾತೃದೇವೋಭವ' - ತಾಯಿಯೇ ದೇವರು - ಇತ್ಯಾದಿ ವಿಚಾರಗಳ ಜತೆಗೆ 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ' - ಸ್ತ್ರೀಯರಿಗೆ ಗೌರವ ಇರುವಲ್ಲಿ ದೇವತೆಗಳು ಸಂತಸ ಪಡುತ್ತಾರೆ - ಎಂಬ ವಿವೇಕವಾಣಿ

'ಹೆಣ್ಣೆ ಭೋಗ್ಯವಸ್ತುವಲ್ಲ; ಆಕೆ ತಾಯಿ, ಸದಾ ವಂದನೀಯಳು' - ಎಂಬ ಈ ಮಾತುಗಳು ಈಗ ಸ್ತ್ರೀ ಸಮಾನತೆಯ ಮಾತು ಹೇಳುವವರಿಗೆ ಮೋಸ, ಹೊಗಳಿ ಹಾಡುವ ಕುತ್ಸಿತ ಬುದ್ಧಿ ಎನ್ನಿಸಬಹುದು ಆದರೆ ಈ ಮಾತು ಉತ್ತಮರ ಜೀವನದಿಂದ ಸ್ಪಷ್ಟವಾಗುತ್ತದೆ. ಒಬ್ಬಳೇ ಪತ್ನಿ ಮಿಕ್ಕವರೆಲ್ಲ ತಾಯಂದಿರು - ಎಂಬ ವ್ಯಾವಹಾರಿಕ ದೃಷ್ಟಿ ಹಿಂದುವನ್ನು ಉಳಿದವರಿಗಿಂತ ಭಿನ್ನವಾಗಿ ತೋರಿಸುತ್ತದೆ. ಹೆಣ್ಣು ಮಕ್ಕಳನ್ನು 'ತಾಯಿ' ಎನ್ನುವ ವಿನಯ ಹಿಂದೂಧರ್ಮದ ವೈಶಿಷ್ಟ್ಯ

ಹೀಗೆ ಹಿಂದೂಧರ್ಮ ತುಂಬ ವ್ಯಾಪಕವಾದ, ಸರ್ವಸಮಾವೇಶಕವಾದ, ಸರ್ವ ಸಂಗ್ರಾಹ್ಯವಾದ ದೃಷ್ಟಿ ಬೆಳೆಸಿಕೊಂಡಿರುವುದರಿಂದಲೇ ಅದು ಸನಾತನವಾಗಿದೆ ಸನಾತನ ಎಂದರೆ ಪ್ರಾಚೀನವೆಂದಷ್ಟೇ ಅರ್ಥವಲ್ಲ; ನಿತ್ಯನೂತನ, ಚಿರಪುರಾ

ತನ - ಎಂದರ್ಥ ಪ್ರಕೃತಿಯಂತೆ ಸದಾ ಹೊಸತನ್ನು ಬಿಂಬಿಸಿಯೂ, ಮೂಲವನ್ನು ಉಳಿಸಿಕೊಳ್ಳುವ ಶಕ್ತಿಗೆ 'ಸನಾತನ' ಎಂದು ಹೆಸರು. ಎಲ್ಲ ಕಡೆಗಳಿಂದ ಉತ್ತಮವಾದುದನ್ನು ಸ್ವೀಕರಿಸಿ, ಬೆಳೆಯುವ ವ್ಯಾವಹಾರಿಕ ಜಾಣ್ಮೆ ಹಿಂದೂಧರ್ಮದ್ದು ಜ್ಞಾನಕ್ಕೆ ಬೆಳಕಿಗೆ ಯಾವ ಅಡ್ಡಿಯೂ ಇಲ್ಲ; ಎಲ್ಲಿಂದಲೇ ಆಗಲಿ ಜ್ಞಾನಬರಲಿ - ಆನೋ ಭದ್ರಾಃ ಕ್ರತವೋಯಂತು ವಿಶ್ವತಃ- Let the noble thoughts come from every side' - ಎಂಬ ಆಶಯ ಹಿಂದುಗಳದು

ಚಕ್ರವರ್ತಿ ರಾಜಗೋಪಾಲಾಚಾರ್ಯರು ತಮ್ಮ 'Hindusm, Doctrine and way of Life' - ಎಂಬ ಅಮೂಲ್ಯ ಗ್ರಂಥದಲ್ಲಿ ಹೇಳಿದಂತೆ There are differences in form and rituals A knowledge of Hinduism will make Hindus better Hindus, and christians better christions, Muslims better Muslims and all of us better citizens in a consolidated nation' - ಎಂಬಂತೆ ಹಿಂದೂಧರ್ಮವನ್ನು ಇತರ ಎಲ್ಲ ಧರ್ಮದವರೂ ಸರಿಯಾಗಿ ಅರ್ಥಮಾಡಿಕೊಂಡರೆ ಉತ್ತಮ ವ್ಯಕ್ತಿಗಳಾಗಿ, ಆದರ್ಶ ಪ್ರಜೆಗಳಾಗಿ, ಈ ದೇಶದ ಏಕತೆಯನ್ನು ಕಾಪಾಡುವುದರ ಜತೆಗೆ ವಿಶ್ವದಲ್ಲಿ ಶಾಂತಿ, ಸ್ನೇಹ, ಸಮೃದ್ಧಿಗಳು ನೆಲೆಸುವಂತೆ ಮಾಡಲು ಸಾಧ್ಯ

ಆದ್ದರಿಂದ ಇಂದಿಗೂ ವಿಶ್ವವಿಖ್ಯಾತ ವಿಜ್ಞಾನಿಗಳಿಗೆ, ದಾರ್ಶನಿಕರಿಗೆ 'ಭಾರತವೇ ಮುಂದಿನ ಜಗತ್ತಿನ ಬೆಳಕು' ಎನ್ನಿಸಿದ್ದರೆ ಆಶ್ಚರ್ಯವೇನಿಲ್ಲ ವಿಜ್ಞಾನದ ಮುಕ್ತ ಬಳಕೆಯಿಂದಾಗಿ ಸಮತೋಲನ ತಪ್ಪಿ, ವಿನಾಶದ ಅಂಚಿಗೆ ಧಾವಿಸುತ್ತಿರುವ ಈ ಜಗತ್ತನ್ನು ಉಳಿಸಬಲ್ಲ ಏಕೈಕ ಶಕ್ತಿ ಎಂದರೆ 'ಹಿಂದೂಧರ್ಮ' - ಎಂದು ಎಲ್ಲರೂ ಹೇಳುತ್ತಾರೆ ಅವರೆಲ್ಲರ ಮಾತನ್ನೇ ವಿಶ್ವವಿಖ್ಯಾತ ಸಮಾಜಶಾಸ್ತ್ರಜ್ಞ, ಇತಿಹಾಸ ವಿದ್ವಾಂಸ ಡಾ|| ಅರ್ನಾಲ್ಡ್ ಟಾಯನ್ಬಿ ಹೀಗೆ ವರ್ಣಿಸಿದ್ದಾರೆ 'ಇಪ್ಪತ್ತನೆ ಶತಮಾನವು ವಿಜ್ಞಾನದ, ತಂತ್ರಜ್ಞಾನದ ಶತಮಾನ ಇದರಲ್ಲಿ ವಿಜ್ಞಾನ - ತಂತ್ರಜ್ಞಾನಗಳು ಬೆಳೆದು, ಮಾನವ ಕುರುಡಾಗಿ ನುಗ್ಗುತ್ತ ವಿನಾಶ ಹೊಂದಿ ಬರಲಿರುವ ಶತಮಾನ -ಇಪ್ಪತ್ತೊಂದನೆಯ ಶತಮಾನ - ಧರ್ಮದ ಶತಮಾನ, ಮಾನವನನ್ನು ರಕ್ಷಿಸುವ ಶತಮಾನ.ಈ ಶತಮಾನವನ್ನು ನಿರ್ಮಿಸುವುದು ಭಾರತದ ತರುಣದ ಹೊಣೆ ಅವರೇ ಇದನ್ನು ರೂಪಿಸಬಲ್ಲರು'- ಎನ್ನುತ್ತಾನೆ, ಈ ಜಗದ್ವಿಖ್ಯಾತ ವಿದ್ವಾಂಸ.

ಲೋಕಮಾನ್ಯ ಚಿಂತಕಟಾಯನ್ಬಿ ಹೇಳಿದ ಹಾಗೆ ಜಗತ್ತು ಇಂದು ಕವಲು ದಾರಿಯಲ್ಲಿದೆ. ವಿಜ್ಞಾನದ ಅಶ್ವ ಬಹುವೇಗವಾಗಿ ಮುನ್ನುಗ್ಗುತ್ತಿದೆ ಹಿಡಿತ ತಪ್ಪಿದ ಕುದುರೆಯನ್ನೇರಿದ ಸವಾರನಂತೆ ಜಗತ್ತು ಬದುಕಿ ಉಳಿಯಲು ಹೊಸದಾರಿಗಳನ್ನು ಹುಡುಕುತ್ತಿದೆ ಈಗ ಅದಕ್ಕೆ ಇರುವ ದಾರಿ ಒಂದೇ ಈ ಹುಚ್ಚು ಕುದುರೆಯ ಓಟವನ್ನು ನಿಯಂತ್ರಿಸಲು ಅದಕ್ಕೆ ಧರ್ಮದ ಕಡಿವಾಣ ಹಾಕಿ, ಸರಿದಾರಿಗೆ ತರಬೇಕು ನಮ್ಮ ಸಮಾಜ ಧರ್ಮಪ್ರಜ್ಞ - ಧರ್ಮಪ್ರಾಣ ಸಮಾಜ ಆಗಬೇಕು. ಹೊಸ ಸವಾಲುಗಳಿಗೆ, ಪಂಥಾಹ್ವಾನಗಳಿಗೆ, ಆಧುನಿಕ ಸಂಶಯಗಳಿಗೆ ಉತ್ತರ ಕೊಟ್ಟು ಎಲ್ಲರಿಗೂ ಯೋಗ್ಯದಾರಿ ತೋರಬೇಕು

ಎಲ್ಲ ಮತ - ಧರ್ಮಗಳವರೂ ಪರಸ್ಪರ ಸಮಾನವಾದ ಅಂಶಗಳನ್ನು ಗಮನಿಸಿ, ಗುರುತಿಸಿ ಪರಸ್ಪರ ಸಹಕರಿಸಬೇಕು ಎಲ್ಲಿ ಅಭಿಪ್ರಾಯ ಭೇದವಿರುವುದೋ ಅಲ್ಲಿ ಅದನ್ನೊಪ್ಪಿ ತಮ್ಮ ಹಾಗೆಯೇ ಇತರರಿಗೂ ಅಭಿಪ್ರಾಯ ಸ್ವಾತಂತ್ರ್ಯವನ್ನಿತ್ತು, ಶಾಂತಿಯುತ ಸಹಬಾಳ್ವೆ ನಡೆಸಲು ಮನಃಪೂರ್ವಕವಾಗಿ ಶ್ರಮಿಸಬೇಕು ಹೀಗೆ ಸರ್ವಧರ್ಮಗಳ ಸೌಹಾರ್ದವು ಪ್ರಾಯೋಗಿಕ ಮತ್ತು ಸಾಧ್ಯ-ಎಂಬುದನ್ನು ತೋರಿಸಿಕೊಡಬೇಕು ಆಗ ವಿಶ್ವಶಾಂತಿ ಖಂಡಿತವಾಗಿ ಸಿದ್ಧಿಸುತ್ತದೆ.

ಈ ನಿಟ್ಟಿನಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳದ ಕೊಡುಗೆ ಬಹಳ ದೊಡ್ಡದು ಮತ - ಧರ್ಮಗಳ ಸೌಹಾರ್ದಕ್ಕೆ ಇಲ್ಲಿಗಿಂತ ಉತ್ತಮವಾದ ಆದರ್ಶ ಈ ದೇಶದ ಬೇರೆಲ್ಲೂ ಕಾಣಸಿಗದು ಶ್ರೀಕ್ಷೇತ್ರದ ಅಧಿದೇವತೆ ಶ್ರೀ ಮಂಜುನಾಥೇಶ್ವರ ಸ್ವಾಮಿಯು ಶೈವರು ಅಥವಾ ಸ್ಮಾರ್ತರು ಆರಾಧಿಸುವ ಶಿವಲಿಂಗ ಇದನ್ನು ಸ್ಥಾಪಿಸಿದವರು ವೈಷ್ಣವ ಅಥವಾ ಮಾಧ್ವಸಂಪ್ರದಾಯದ ಯತಿಗಳಾದ ಶ್ರೀ ವಾದಿರಾಜಸ್ವಾಮಿಗಳವರು ಇಲ್ಲಿನ ಅರ್ಚಕರು ವಿಭೂತಿಯನ್ನೂ, ಗೋಪಿಚಂದನವನ್ನೂ ಧರಿಸುವ ಭಾಗವತ ಸಂಪ್ರದಾಯದವರು ಇಲ್ಲಿನ ಎಲ್ಲ ಕಾರ್ಯಭಾರಗಳನ್ನೂ ನೋಡಿಕೊಳ್ಳುವ ಧರ್ಮಾಧಿಕಾರಿಗಳಾದ ಪೂಜ್ಯ ಹೆಗ್ಗಡೆಯವರು ಜೈನರು ಅವರು ಅನೂಚಾನವಾಗಿ ಪ್ರತಿವರ್ಷ ನಡೆಸುತ್ತಿರುವುದು ಸರ್ವಧರ್ಮಸಮ್ಮೇಳನ ಯಾವ ಧರ್ಮವೇ ಇರಲಿ, ಅದು ಲೋಕೋದ್ಧಾರಕ್ಕಾಗಿ ಹೊರತು ಪರಸ್ಪರ ಘರ್ಷಣೆಗೆ ಅಲ್ಲ - ಎಂಬ ಸಂದೇಶವನ್ನು ಈ ಕ್ಷೇತ್ರ ಶತ-ಶತಮಾನಗಳಿಂದ ನೀಡುತ್ತ ಬರುತ್ತಿರುವುದು ಈ ನೆಲದ ಪುಣ್ಯ, ನಮ್ಮೆಲ್ಲರ ಸೌಭಾಗ್ಯ ಇಂತಹ ಸರ್ವಧರ್ಮ ಸಮನ್ವಯ ಮೂರ್ತಿಯಾದ ಶ್ರೀ ಮಂಜುನಾಥೇಶ್ವರ ಸ್ವಾಮಿಯು ಜಗತ್ತಿನ ಎಲ್ಲ ಧರ್ಮಗಳವರಿಗೂ ಸಮನ್ವಯ ಭಾವವನ್ನು, ಸದ್ಬುದ್ಧಿಯನ್ನು ಕರುಣಿಸಲಿ, ಪರಮಪೂಜ್ಯ ಶ್ರೀ ಹೆಗ್ಗಡೆಯವರ ಮಾರ್ಗದರ್ಶನ ಸದಾಕಾಲ ನಮಗೆಲ್ಲ ಲಭಿಸಲಿ - ಎಂದು ಪ್ರಾರ್ಥಿಸಿ, ನನ್ನ ಮಾತುಗಳನ್ನು ಮುಗಿಸುತ್ತೇನೆ, ನಮಸ್ಕಾರ



(ಮುಂದುವರೆದಿದೆ)

ಇನಿದಿರ್ಕೈತ್ತ ವಲ್ಕೈ ಮೋದ
ವೆರಿಯುಂ ತಣ್ ಪರವೈ ಮಾಡೇ
ತನಿಕಿಡಿನ್ದರಶಂ ಶೆಯ್ಯುಂ
ತಾಮರೈಕಣ್ಣ ನೆಮ್ಮಾನ್
ತನಿಯಿರುಂದ ನೈಯ
ಶೆವ್ವಾಯ್ ಕಣ್ಣನೈ ಕಂಡ ಕಂಗಳ್
ಪನಿಯಿರುಂ ಪುದಿರುಮಾಲೋ
ಎನ್ ಶೈಗೇನ್ ಪಾವಿಯೇನೇ

ಸುಂದರನಾದ ಸ್ವಾಮಿಯ ದರ್ಶನದಿಂದ ಆಳ್ವಾರ್ ಅವರ ಕಣ್ಣುಗಳಲ್ಲಿ ಆನಂದಬಾಷ್ಪ ಉಕ್ಕಿ ಉಕ್ಕಿ ಹರಿದುಬರುತ್ತಿದೆ. ಅಲೆಗಳ ಹನಿಗಳು ಸಿಂಪಡಿಸುವುದಂತೆ! ಉಕ್ಕಿ ಆನಂದದಿಂದ ಹರಿಯುವ ಕಾವೇರಿಯ ಪಾತ್ರ ಬಳಸಂತೆ! ಏಕಾಂತ ಶಯನವಂತೆ! ತಾವರೆ ಪುಷ್ಪದ ಕಣ್ಣಂತೆ! ಇನಿದಾದ ಕಳಿತ ತೊಂಡೆಯ ಹಣ್ಣಿನಂತೆ ಕೆಂಪು ವರ್ಣದ ಬಾಯಂತೆ! ಸೌಂದರ್ಯವೇ ಮೈವೆತ್ತಂತೆ ಇರುವ ಕೃಷ್ಣನಂತೆ ರಂಗನಾಥ! ಇವನ ರೂಪವನ್ನು ಕಂಡು ಮರುಳಾಗದ ಭಕ್ತರುಂಟೆ! ರಾಮನ ಸೌಂದರ್ಯವನ್ನು ಕಂಡ ಋಷಿಗಳು 'ಅಯ್ಯೋ! ನಾವು ಸ್ತ್ರೀಯರಾಗಿ ಜನಿಸಿ ಅವನೊಡನೆ ಸೌಖ್ಯ ಅನುಭವಿಸುವ ಭಾಗ್ಯ ಉಂಟಾಗಲಿಲ್ಲವೇ' ಎಂದು ಕೊರಗಿ ಮುಂದಿನ ಜನ್ಮದಲ್ಲಿಯಾದರೂ ಆ ಭಾಗ್ಯ ಅನುಗ್ರಹಿಸು ಎಂದು ಬೇಡಿಕೊಂಡರಂತೆ. ಹಾಗಾಗಿಯೇ ಕೃಷ್ಣ ಜನುಮದಲ್ಲಿ ಅವರೆಲ್ಲರನ್ನೂ ಗೋಪಸ್ತ್ರೀಯರನ್ನಾಗಿ ಹುಟ್ಟಿಸಿ ತನ್ನೊಂದಿಗೆ ರಮಿಸುವ ಸೌಭಾಗ್ಯ ನೀಡಿದನಂತೆ ಪರಮಾತ್ಮ! ಜೀವ ಸ್ತ್ರೀಯಂತೆ, ಪರಮಾತ್ಮನೊಬ್ಬನೆ ಪುರುಷ. ಅವನನ್ನು ಹೊಂದಲು ಜೀವ ತಹತಹಿಸುವಿಕೆ ಸಹಜ ತಾನೆ! ಅದಕ್ಕೆ ಆತ ಸುಂದರನಾಗಿಯೂ, ಆಕರ್ಷಕನಾಗಿಯೂ ಕಂಡುಬಂದರೆ ಆಶ್ಚರ್ಯವೇನಿದೆ? ಆಳ್ವಾರರಿಗೆ ಅವರ ಕಣ್ಣ ನೀರನ್ನು ಒರೆಸಿಕೊಂಡಂತೆಲ್ಲ ಅದು ಬರುತ್ತಲೇ ಇದೆ. ಏಕೆಂದರೆ ಪಾಪಿಯಾದ ತನ್ನನ್ನೂ ಉದ್ಧಾರ ಮಾಡಿದನಲ್ಲ ಎಂಬ ರೋಮೋದ್ಗಮ. ಇಂತಹ ಸುಂದರ ರೂಪಿಯನ್ನು ಸದಾ ನೋಡುತ್ತಿರುವಂತೆ ಆಗುವುದಿಲ್ಲವಲ್ಲ ಎಂಬ ನೈರಾಶ್ಯ ಭಾವ. ಇದೊಂದು ಭವ್ಯ ಆನಂದಾನುಭೂತಿ

ಕುಡದಿಶೈ ಮುಡಿಯೈ ವೈತ್ತು
ಕುಣ ದಿಶೈ ಪಾದಂ ನೀಟ್ಟಿ
ವಡದಿಶೈ ಪಿನ್ಬು ಕಾಟ್ಟಿ
ತೆಂತಿಶೈ ಇಲಂಗೈ ನೋಕ್ಕಿ
ಕಡಲ್ ನಿರಕ್ಕಡವು ಳೆಂದೈ
ಯರವಣೈತ್ತುಯಿಲು ಮಾಗಂಡು
ಉಡ ಲೆನಕ್ಕುರುಮಾಲೋ
ಎನ್‌ಶೈಯ್‌ಗೇನ್ ಉಲಗತ್ತೀರೇ

# ತಿರುಮಾಲೈ

- ಎಂ. ಆರ್. ನರಸಿಂಹನ್.

ಸಾಗರವರ್ಣನಾದ ಸ್ವಾಮಿಯು ಶಯನಿಸಿರುವ ಸೊಬಗನ್ನು ಏನು ವರ್ಣಿಸಲಿ. ಪೂರ್ವ ದಿಕ್ಕಿಗೆ ತಲೆ, ಪಶ್ಚಿಮಕ್ಕೆ ಕಾಲು, ಉತ್ತರಕ್ಕೆ ಬೆನ್ನು, ದಕ್ಷಿಣಕ್ಕೆ ಲಂಕೆಯ ವೀಕ್ಷಣೆ, ಮಲಗಿರುವುದು ಹೂವಿನ ಹಾಸಿಗೆ. ಇಂತಹ ಅದ್ಭುತ ದೃಶ್ಯವನ್ನು ಕಂಡ ಒಡಲು ಕರಗಿ ಹೋಗುತ್ತಿದೆಯಲ್ಲ, ನಾನೇನು ಮಾಡಲಿ, ಜನರೇ - ಎಂದು ಮೈಮರೆತು ಕೂಗುತ್ತಾರೆ ಆಳ್ವಾರ್. ತಿರುಮಂಗೈ ಆಳ್ವಾರರ ತಿರುಕ್ಕುರುಂದಾಂಡಗಮ್ ನಲ್ಲಿ ಬರುವ ಪರಮಾತ್ಮನ ವರ್ಣನೆಗೂ ತೊಂಡರಡಿಪ್ಪೊಡಿ ಆಳ್ವಾರ್ ಅವರ ವರ್ಣನೆಗೂ ಹೋಲಿಸಿ ನೋಡಿದಾಗ ಯಾವುದು ಹೆಚ್ಚು ಯಾವುದು ಕಡಿಮೆ ಎಂಬುದೇ ತಿಳಿಯದು. ಎರಡೂ ಸೊಗಸಾಗಿಯೇ ಕಾಣುತ್ತವೆ. ಎರಡೂ ಅದ್ವಿತೀಯವೇ ಸರಿ. ಆಳ್ವಾರರಿಗೆ ಸುನಾಯಾಸವಾಗಿ ದೈವದರ್ಶನ ಆದಂತೆ ನಮಗೂ ಈ ಪವಿತ್ರ ಪಾಶುರದ ಮೂಲಕ ಆ ದೈವದರ್ಶನ ಒದಗುವಂತೆ ಮಾಡಿದ್ದಾರೆ. ದಕ್ಷಿಣದ ಲಂಕೆಯನ್ನು ನೋಡುತ್ತಿರುವ ಎಂದು ಆಳ್ವಾರ್ ಹೇಳಿರುವುದರ ಔಚಿತ್ಯವನ್ನು ಮೂರು ನಾಲ್ಕು ಬಗೆಯಲ್ಲಿ ವ್ಯಾಖ್ಯಾನಿಸಬಹುದಾಗಿದೆ-

ಶ್ರೀರಾಮಚಂದ್ರನು ತಾನು ಆರಾಧಿಸುತ್ತಿದ್ದ ರಂಗನಾಥನನ್ನು ತನ್ನ ಪರಮಾಪ್ತನಾದ ವಿಭೀಷಣನಿಗೆ ನೀಡಿದ. ವಿಭೀಷಣನು ಶ್ರೀರಂಗದಲ್ಲಿ ಸಕಲ ಲೋಕಗಳನ್ನು ಅನುಗ್ರಹಿಸಲೆಂದು ಅದನ್ನು ಪ್ರತಿಷ್ಠಾಪಿಸಿದ. ಇಂತಹ ವಿಶಾಲಬುದ್ಧಿಯುಳ್ಳ ವಿಭೀಷಣನನ್ನು ರಂಗನಾಥನು ಸದಾ ಕಟಾಕ್ಷಿಸುವನೆಂದು ಒಂದು ವ್ಯಾಖ್ಯಾನ. ಏಕೆಂದರೆ ವಿಭೀಷಣ ಚಿರಂಜೀವಿ. ಅವನ ವಾಸ ಲಂಕೆಯಲ್ಲಿ. ಆದ್ದರಿಂದ ರಂಗನಾಥನು ಆ ಕಡೆ ನೋಟವಿಟ್ಟಿದ್ದಾನೆ. ಸೀತೆ ಸ್ವಲ್ಪ ಕಾಲ ಲಂಕೆಯಲ್ಲಿ ಇದ್ದಳು. ರಾವಣನಿಗೆ ಮೋಕ್ಷವನ್ನು ಕರುಣಿಸಲು ಆಕೆ ಪುರುಷಕಾರ ಮಾಡಿದಳೆನ್ನಬಹುದಲ್ಲವೆ. ಈ ದೃಷ್ಟಿಯಿಂದ ಲಂಕೆಗೆ ಮಹತ್ವದ ಸ್ಥಾನ ಲಭಿಸಿತು. ಆಕೆ ನೆಲೆಸಿದ ಜಾಗ ಶ್ರೀಯುಕ್ತವಾದದ್ದು. ಈ ದೃಷ್ಟಿಯಿಂದ ರಾಮನಿಗೆ ಲಂಕೆ ಮಹತ್ವದ ನೆಲವಾಗಿ ಆತನು ಅದನ್ನು ವೀಕ್ಷಿಸುತ್ತಿದ್ದಾನೆ ಎನ್ನಬಹುದು. ಶ್ರೀರಾಮನ ವಿಜಯ ವೀರ್ಯವನ್ನು ಪ್ರಕಾಶ ಪಡಿಸಿದ್ದು ಲಂಕೆ. ಅವನನ್ನು ಅವತಾರ ಪುರುಷ ಸ್ಥಾನಕ್ಕೇರಿಸಿದ್ದು ಲಂಕೆ. ರಾಮಾಯಣ ಮಹಾಕಾವ್ಯಕ್ಕೆ ಮೂಲವಾದದ್ದು ಲಂಕೆ. ತನಗೆ ಹಿರಿಮೆ ನೀಡಿದ ಸ್ಥಾನ ಎಂದು ಅರುಮೆಯಿಂದ ಕಟಾಕ್ಷಿಸುತ್ತಿದ್ದಾನೆ ಸ್ವಾಮಿ ಎಂದರೂ ಒಪ್ಪುತ್ತದೆ.

ಪಾಯು ನೀರರಂಗದನ್ನುಳ್
ಪಾಂಬಣೈ ಪಳ್ಳಿಕೊಂಡ
ಮಾಯನಾರ್ ತಿರುನನ್ ಮಾರ್ಬುಂ
ಮರಕತವುರವುಂ ತೋಳುಂ
ತೂಯ ತಾಮರೈ ಕಣ್ಗಳುಂ
ತುವ್ವರಿದಳ ಪ್ಪವಳ ವಾಯುಂ
ಆಯಶೀರ್ ಮುಡಿಯುಂ ತೇಶುಂ
ಅಡಿಯೋಕ್ಕುಂ ಅಹಲಲಾಮೇ

ಪ್ರವಾಹ ಪರಿವೃತವಾದ ಕಾವೇರಿಯ ಮಧ್ಯೆ ಶೇಷಪ
ರ್ಯಂಕಶಾಯಿಯಾದ ಆಶ್ಚರ್ಯ ಚೇಷ್ಟಿತ ಗುಣಗಳುಳ್ಳ, ಲಕ್ಷ್ಮಿಯ ಆವಾಸವನ್ನು ಒಳಗೊಂಡ ವಕ್ಷಃಸ್ಥಳವುಳ್ಳ, ಮರಕತವರ್ಣ, ನಿಡುದೋಳು, ತಾವರೆಯೆಸಳಿನ ನಯನ, ಕೆಂಪು ಹವಳದ ಬಾಯಿ, ವಿಶಿಷ್ಟ ಶ್ರೀಮುಡಿ - ಇವುಗಳಿಂದ ಸೊಗಸುವ ತೇಜೋಮಯ ಮೂರ್ತಿ ರಂಗನಾಥನನ್ನು ಪರಿಭಾವಿಸುವ ಭಕ್ತನಾದ ನನಗೆ ಅವನನ್ನು ಒಂದು ನಿಮಿಷ ಅಗಲಿರಲಾಗದು. ಮನ್ಮಥನೇ ಸೌಂದ

ರ್ಯದ ಸಾಕಾರ ಅವನ ಪಿತನಾದ ಪರಮಾತ್ಮನು ಇನ್ನೆಷ್ಟು ಸುಂದರನಾಗಿರಬೇಕು? ಅಂತಹ ಸೊಬಗಿನ ಸ್ವಾಮಿ ನಮ್ಮ ಶ್ರೀರಂಗನಾಥ

ಇಂತಹ ಹವಳದ ಬಾಯಿನ ರಂಗನಾಥನನ್ನು ದೃಢಭಕ್ತಿಯಿಂದ ಸೇವಿಸಿ ಕೈಂಕರ್ಯವೆಸಗುತ್ತ ಬಾಳಲಾರದ ನಿರ್ಭಾಗ್ಯ ಮನಸ್ಸೆ, ಸುಂದರನಾದ ಅಪರಂಜಿ ಬಂಗಾರದ ಶ್ರೀರಂಗದ ದೇಗುಲದಲ್ಲಿ ವಿರಾಜಮಾನನಾಗಿರುವ ಆತನನ್ನು ಮನಸ್ಸಿನಿಂದ ಅಳೆಯಲು ಸಾಧ್ಯವೇ? ವೇದಸ್ತೋತ್ರಾದಿಗಳ ಅನುಸಂಧಾನದಿಂದ ಆತನ ವೈಭವ ಪರಿಚಯ ಮಾತ್ರಗೊತ್ತು ಅದನ್ನೇ ಮತ್ತೆ ಮತ್ತೆ ಹೇಳಿ ಆನಂದಿಸುತ್ತೇನೆ. ದೇರೆ ಯಾವ ಸಾಧನಗಳಿಂದ ಅವನ ಮಹಿಮೆ ಅಳೆಯಬೇಕೋ ಅರಿಯೆನು ಅಂತಹ ಸಾಧನಗಳು ಇಲ್ಲವೂ ಇಲ್ಲ ಎಂದು ತಿಳಿದಿದ್ದೇನೆ ಪ್ರಪತ್ತಿ ಮಾರ್ಗವನ್ನೂ ಪುರುಷಾರ್ಥಾಂತರಗಳನ್ನು ಬಿಟ್ಟವರಿಗೆ ಇದು ಅರ್ಥವೂ ಆಗದು ಕಳಂಕರಹಿತರಾಗಿ ಅವನೇ ದೈವವೆಂದು ನಂಬಿರುವವರ ಹೃದಯದಲ್ಲಿ ಆತ ವಾಸ ಮಾಡುತ್ತಿರುವ ಅದನ್ನರಿತು ಆತನೇ ಗುರಿ ಗಂತವ್ಯವೆಂದು ಅರಿತು ಆಶ್ರಯ ಮಾಡು, ದೇರೇನೂ ಮಾರ್ಗವಿಲ್ಲ

ಗಂಗೈಯಿಲ್ ಪುನಿದಮಾಯ
ಕಾವಿರಿ ನಡುವು ಪಾಟ್ಟು
ಪೊಂಗುನೀರ್ ಪರಂದು ಪಾಯುಂ
ಪೂಂ ಪೊಳಿಲ್ ಅರಂಗಂ ತನ್ನುಳ್
ಎಂಗಳ್ ಮಾಲ್ ಇರೈಯವ ನೀಶನ್
ಕಿಡಂದದೋರ್‌ಕ್ಕಿಡಕ್ಕೈ ಕಂಡುಂ
ಎಂಗನಂ ಮರಂದು ವಾಳ್ ವೇನ್
ಏಳ್ಳೈಯೇ ನೇಳ್ಳೈಯೇನೇ

ಅದ್ಭುತವಾದ ಭಾವ ಇಲ್ಲಿ ಅವತರಿಸಿದೆ ಗಂಗೆಗೆ ಜಹ್ನು ಋಷಿಯ ದೇಹ ಸಂಪರ್ಕ ಉಂಟು ಶಿವನ ಶಿರದ ಸಂಪರ್ಕವುಂಟು ಕಾಶಿಯ ಸ್ಮಶಾನದ ಸಂಪರ್ಕ ಉಂಟು ಗಂಗೆ ಜನರ ಪಾಪವನ್ನು ಪರಿಹರಿಸಿದರೂ ಮೇಲಿನ ದೃಷ್ಟಿಯಿಂದ ಆಕೆಗೆ ಮೈಲಿಗೆ ಅಂಟಿದೆ ಆದರೆ ಕಾವೇರಿಗೆ ಆ ಯಾವ ಅಂಟೂ ಇಲ್ಲ ಮೇಲಾಗಿ ಗಂಗೆಯ ಅವತರಣವೇ ಸಗರ ಪುತ್ರರ ಬೂದಿ ಕದಡುವ ಉದ್ದೇಶದಿಂದ ಕಾವೇರಿಯ ಅವತಾರ ಲೋಕೋಪಕಾರಕ್ಕಾಗಿ ಈ ದೃಷ್ಟಿಯಿಂದ ಕಾವೇರಿ ಗಂಗೆಗಿಂತ ಹೆಚ್ಚು ಮಹಿಮಾನ್ವಿತಳು ಎನ್ನಬೇಕು ಮೂರು ಕ್ಷೇತ್ರಗಳಲ್ಲಿ ರಂಗನಾಥಸ್ವಾಮಿಯನ್ನು ಬಲವಂದು ಹರಿಯುವ ಮಾತೃದೇವತೆ ಅಗಸ್ತ್ಯರು ವಿಷ್ಣುವಿನ ಅವತಾರವೆನ್ನಲು ಅವರು ವೈಷ್ಣವ ಧನುಸ್ಸನ್ನು ಶ್ರೀರಾಮನಿಗೆ ನೀಡಿದ ಆಖ್ಯಾಯಿಕೆ ಇದೆ ಆದ್ದರಿಂದ ಅಗಸ್ತ್ಯರು ಬೇರೆ ಅಲ್ಲ ವಿಷ್ಣುಬೇರೆ ಅಲ್ಲ ಅವರೇ ನಾರಾಯಣ ಸ್ವರೂಪಿಗಳು ಎನ್ನಲು ತಮ್ಮ ಬೀಜಾಕ್ಷರ ರೂಪವಾದ ಆದಿತ್ಯ ಹೃದಯವನ್ನು ಶ್ರೀರಾಮನಿಗೆ ಉಪದೇಶಿಸಿದರು ನಾರಾಯಣನು ಸವಿತೃಮಂಡಲ ಮಧ್ಯವರ್ತಿ ಆದಿತ್ಯನ ಮತ್ತೊಂದು ರೂಪ ನೀರಿನ ಸಂಬಂಧವಿರುವ ಸೂರ್ಯನಿಗೆ ಸೂರ್ಯನಾರಾಯಣ ಎಂದು ಕರೆಯುವರು ಹೀಗೆ ಅಗಸ್ತ್ಯರು, ಆದಿತ್ಯ, ರಾಮ, ಸೂರ್ಯನಾರಾಯಣ ಎಲ್ಲರೂ ಒಂದೇ ಸ್ವರೂಪಿಗಳು - ಹಲವು ರೂಪ ಅಷ್ಟೆ. ಅಗಸ್ತ್ಯಪತ್ನಿ ಕಾವೇರಿ ಸಾಕ್ಷಾತ್ ಲಕ್ಷ್ಮಿಸ್ವರೂಪಿಯೇ ಸರಿ ಆದ್ದರಿಂದಲೇ ಕಾವೇರಿ ರಂಗನಾಥನನ್ನು ಸೇವಿಸುತ್ತಿರುವುದು ಇಂತಹ ಪವಿತ್ರ ಸಲಿಲದ ಮಧ್ಯೆ ರಂಗನಾಥನು ಮಲಗಿರುವುದು ಆತನ ಶಯನ ಭಂಗಿಯನ್ನು ಕಂಡ ಮನಸ್ಸು ಮತ್ತೇನನ್ನೂ ಅಪೇಕ್ಷಿಸುವುದೇ ಇಲ್ಲ ಅಂತಹವನನ್ನು ಮರೆತು ಬಾಳಲೇನು ಎನ್ನುತ್ತಾರೆ ಈ ಭಾವ ನನಗೆ ಆಗಲೇ ಬರಲಿಲ್ಲ ಎಂದು ಅಳುತ್ತಾರೆ ಈ ಭಾವವಿಲ್ಲದೆ ಬಡವರಲ್ಲಿ ಬಡವನಾಗಿ ಇದ್ದು ಬಿಟ್ಟೆವಲ್ಲ ಎಂದು ಪರಿತಪಿಸುತ್ತಾರೆ - ಆಳ್ವಾರ್

ಈ ವಿವರವನ್ನೇ ಮುಂದಿನ ಪಾಶುರ ಬೇರೆ ರೀತಿಯಲ್ಲಿ ವಿವರಿಸುತ್ತದೆ.

ವೆಳ್ಳ ನೀರ್ ಪರಂದು ಪಾಯ್ದು
ವಿರಿ ಪೊಳಿಲ್ ಅರಂಗ ತನ್ನುಳ್
ಕಳ್ವನಾರ್ ಕಿಡಂದವಾರಂ
ಕವಲನನ್ನುಗಮುಂ ಕಂಡು
ಉಳ್ಳಮೇ ವಲಿಯೈಪ್ಪೋಲುಂ
ಒರುವನೆನ್ನುಣರ ಮಾಟ್ಟಾಯ್
ಕಳ್ಳಮೇ ಕಾದಲ್ ಶೈದುನ್
ಕಳ್ಳತ್ತೇ ಕಳಿಕ್ಕಿನ್ರಾಯೇ

ಕಾವೇರಿಯ ಮಹಾಪ್ರವಾಹದ ಮಧ್ಯೆ ಪವಡಿಸಿರುವ ರಂಗನಾಥನ ಆ ಸರ್ವಮಂಗಳ ವಿಗ್ರಹವನ್ನು ಕಂಡು ಮನಸ್ಸೇ, ನೀನೇಕೆ ಕಠಿಣವಾಗಿಯೇ ಇದ್ದೀಯೆ ಆತ ಅದ್ವಿತೀಯನೆಂದೇಕೆ ತಿಳಿಯಲೊಲ್ಲೆ ಕಪಟಭಕ್ತಿಯನ್ನು ನಟಿಸುತ್ತ ವಂಚಿಸುತ್ತಲೇ ಇರುವೆಯಲ್ಲ ಇದು ಸರಿಯಲ್ಲ

ಇದೇನು ಅವೇ ಮಾತುಗಳನ್ನು ಮತ್ತೆ ಮತ್ತೆ ಹೇಳುತ್ತಿರುವರಲ್ಲ ಎಂದು ಬೇಸರವಾಗಬಹುದು ಭಕ್ತಿಯ ಆವೇಗದಲ್ಲಿ ಅವೇ ಮಾತುಗಳು ಸ್ತುತಿಸಲು ಬಳಸಲ್ಪಡುತ್ತಿವೆ ಇದು ಭಕ್ತಿಯ ಪರಾಕಾಷ್ಠೆ ಹೇಳಿದ್ದೆ ಹೇಳುವರು, ಕೇಳಿದ್ದೆ ಕೇಳುವರು ಹೇಳಿದ್ದೆ ಹೇಳಿ ಸುಖಿಸುವರು - ಎಂಬ ಸರ್ವಜ್ಞನ ನುಡಿಯಂತೆ ಅದರಲ್ಲಿಯೇ ಸಂತೋಷ ಸಂತೃಪ್ತಿ. ಒಬ್ಬನಿಗೆ ಯಾರೋ ಒಳ್ಳೆಯದನ್ನು ಮಾಡಿದರು ಎಂದುಕೊಳ್ಳಿ, ಆಗ ಆತ ತನ್ನ ಕೃತಜ್ಞತೆಯನ್ನು ಅದೇ ಮಾತುಗಳಿಂದ ನೂರು ಸಲ ವ್ಯಕ್ತಪಡಿಸಿ ತೃಪ್ತನಾಗುತ್ತಾನೆ ಸಾಲದ್ದಕ್ಕೆ ಎಲ್ಲರ ಮುಂದೂ ಅದೇ ಮಾತು, ಅದೇ ಹೊಗಳಿಕೆ, ಅದೇ ಪ್ರಸ್ತಾಪ ರಾಮಾಯಣ ಮಹಾಭಾರತಗಳನ್ನು ಎಷ್ಟು ಬಾರಿ ಹೇಳಿದರೂ ಪ್ರತಿ ಬಾರಿಯೂ ಶ್ರಾವಕರು ಮೊದಲಬಾರಿಗೆ ತಮ್ಮ ಕಿವಿಯ ಮೇಲೆ ಬೀಳುವಂತೆ ತಲ್ಲೀನತೆಯಿಂದ ಕೇಳುವುದನ್ನು ನೋಡಿಲ್ಲವೆ ಭಗವಂತನ ವಿಚಾರವೇ ಹಾಗೆ ಕೇಳಿದ್ದನ್ನೇ ಕೇಳಿದರೂ ಬೇಸರವಾಗದು ಹೇಳುವವನಿಗೂ ಉತ್ಸಾಹ ಹೆಚ್ಚುವುದೇ ಹೊರತು ತಗ್ಗುವುದಿಲ್ಲ ಆದ್ದರಿಂದ ಆಳ್ವಾರರ ಮಾತು ಮರುಕಳಿಸಿದರೂ ಶ್ರಾವಕರಿಗೆ ಬೇಸರ ಏರ್ಪಡದು

ನಿನ್ನನ್ನು ಉಪಾಸಿಸುವ ಅಗ್ನಿ ವಿದ್ಯೆಯನ್ನು ನಾನರಿಯೆ ಕರ್ಮ ವಿಧಿಗಳಿಂದ ನಿನ್ನನ್ನು ಒಲಿಸುವ ವಿಧಾನ ನನಗೆ ಗೊತ್ತಿಲ್ಲ ನಿನ್ನ ಭಕ್ತಿಯನ್ನೂ ನಾನು ನೋಡಿಲ್ಲ ನನಗೇ ನಾಚಿಕೆಯಾಗುತ್ತಿದೆ. ಬ್ರಾಹ್ಮಣನಾಗಿ ಹುಟ್ಟಿ ಎಲ್ಲವನ್ನೂ ಬಿಟ್ಟಿದ್ದೇನೆ. ನನಗೆ ಗೊತ್ತಿರುವುದೆಲ್ಲಾ ಒಂದೇ - ನನ್ನನ್ನು ಕೈಬಿಡದೆ ರಕ್ಷಿಸು ಕಡಲ ಬಣ್ಣದವನೇ - ಎಂದು ಕರೆಯುವುದು ಕೃಪೆ ತೋರು ರಂಗನಾಥ. ನಿನ್ನ ಚರಣಾರವಿಂದಗಳಲ್ಲಿ ಪುಷ್ಪಾರ್ಚನೆ ಮಾಡುವ ಯೋಗ್ಯತೆಯೂ ನನಗಿಲ್ಲ ನಿನ್ನ ನಾಮ ಸಂಕೀರ್ತನೆ ಮಾಡಲೂ ನಾನು ಅಸಮರ್ಥ ನಿನ್ನ ಕರುಣೆಯನ್ನು ಹೊಂದಲೂ ನನ್ನ ಕಲುಷಿತ ಮನಸ್ಸು ಅಡ್ಡಿಪಡಿಸುತ್ತಿದೆ ಆದರೆ ಹೀಗೆ ಜನ್ಮವನ್ನು ವ್ಯರ್ಥ ಮಾಡುತ್ತಿರುವುದಕ್ಕೆ ನನಗೇ ನಾಚಿಕೆಯಾಗುತ್ತಿದೆ.

ಮುಂದಿನ ಎರಡು ಪಾಶುರಗಳು ಅದ್ವಿತೀಯವಾಗಿವೆ

ಕುರಂಗುಹಳ್ ಮಲೈಯೈ ನೂಕ್ಕ
ಕುಳಿತ್ತು ತಾಂ ಪುರಟ್ಟೋಡಿ
ತರಂಗ ನೀರಡೈಕ್ಕ ಉಟ್ರ ಚಲ

ಮಿಲಾವಣಿಲಂ ಪೋಲೇನ್
ಮರಂಗಳ್ ಪೋಲ್ ವಲಿಯನೆಂಜಂ
ವಂಜನೇನ್ ನಂಜುದನ್ನಲ್
ಅರಂಗನಾರ್ಕ್ಕಾಳ್ ಚ್ಛೆಯ್ಯಾದೇ
ಅಳಿಯತ್ತೇನಯರ್ ನಿನ್ರೇನೇ

ವಾನರ ವೀರರು ಬೆಟ್ಟಗಳನ್ನು ತಂದೊಟ್ಟಿ ಕಡಲಿಗೆ ಸೇತುವೆಯನ್ನು ಕಟ್ಟಿದರು ಆದರೆ ಕಡಲಿನಲ್ಲಿ ಒಮ್ಮೆ ನೆನೆದು, ಮರಳಿನಲ್ಲಿ ಹೊರ ಳುತ್ತ ಮೈಗೆ ಮರಳು ಅಂಟಿಸಿಕೊಂಡು ಅದನ್ನು ಬಂಡೆಗಳ ಮೇಲೆ ಬೀಳುವಂತೆ ಮಾಡಿದ ಅಳಿಲ ಭಕ್ತಿ ಸಾಮಾನ್ಯವೇನು ಅವು ಸ್ನಾನ ಮಾಡಿ ಪರಿಶುದ್ಧವಾಗಿ ಕೈಂಕರ್ಯ ವೆಸಗಿ ದವು. ಆ ಬುದ್ಧಿಯೂ ನನಗಿಲ್ಲವಾಗಿದೆ. ಮರ ಗಟ್ಟಿಯಾಗಿರುವ ಮನಸ್ಸು ಹೃದಯಗಳಿಗೆ ಈ ಅಳಿಲು ಸೇವೆಯ ಆಕಾಂಕ್ಷೆಯೂ ಉಂಟಾಗು ತ್ತಿಲ್ಲ ದೈವಿಕ ವಾತಾವರಣದಲ್ಲಿಯೇ ಜನ್ಮ ತಳೆ ದರೂ ನಾನು ಆತನನ್ನು ಸೇವಿಸದೆ ಅನರ್ಥಗಳಿಗೆ ಒಳಗಾಗಿದ್ದೇನೆ.

ರಾಮಾಯಣದಲ್ಲಿ ಅಳಿಲಿನ ಪ್ರಸ್ತಾವ ಇಲ್ಲದಿ ದ್ದರೂ ಆಳ್ವಾರರು ಅದನ್ನು ಪ್ರಸ್ತಾಪಿಸಿ ಅಳಿಲ ಸೇವೆಗೆ ಪ್ರಾಶಸ್ತ್ಯ ನೀಡಿದ್ದಾರೆ ಇದೊಂದು ಸೊಗ ಸಾದ ನಿರೂಪಣೆಯಾಗಿದೆ. ಅಳಿಲು ನೀರಿನಲ್ಲಿ ಮುಳುಗೆದ್ದದ್ದು ಮರಳು ಅಂಟಿಕೊಳ್ಳಲಿ ಎಂಬು ದಾಗಿ ಆದರೆ ಆಳ್ವಾರರು ಅವು ಸ್ನಾನ ಮಾಡಿ ಪರಿ ಶುದ್ಧವಾಗಿ ಭಗವಂತನ ಕೈಂಕರ್ಯವೆಸಗಿದವೆಂ ಬುದಾಗಿ ವ್ಯಾಖ್ಯಾನ ಮಾಡಿರುವುದು ನಿಜಕ್ಕೂ ಮೆಚ್ಚತಕ್ಕ ವಿಚಾರವಾಗಿದೆ. ಇದು ಮಾತ್ರವ ಲ್ಲದೆ ಅಳಿಲಿನ ಸಂಗತಿ ನಾಲಾಯಿರ ಪ್ರಬಂಧದಲ್ಲಿ ಇಲ್ಲಿ ಮಾತ್ರ ಪ್ರಸ್ತಾಪವಾಗಿದೆ ಎಂಬುದೊಂದು ವಿಶೇಷ ಆಳ್ವಾರ್ ಒಮ್ಮೆ ಇರುಂಬುಪೋಲ್ ಎಂದರು ತಿರುಮಂಗೈ ಆಳ್ವಾರ್ ಸಹ ಎರಡು ಮೂರುಸಲ ಕಬ್ಬಿಣದ ಉದಾಹರಣೆ ನೀಡಿದರು ಕಬ್ಬಿಣ ಬೆಂಕಿಗೆ ಕರಗಬಹುದು, ಆದರೆ ಇಲ್ಲಿ ಮರಕ್ಕೆ ಹೋಲಿಕೆ ನೀಡಿದ್ದಾರೆ ಕಬ್ಬಿಣದಂತೆ ಮರಕ್ಕೆ ಬೆಂಕಿ ತಗುಲಿದರೆ ಮರ ಕರಗದು, ಸುಟ್ಟು ಕರಕಾಗುತ್ತದೆ. ಅದು ಬೆಂಕಿಗೂ ಬಗ್ಗದು ಮರದ ಒರಟುತನ ಅತಿಯಾದದ್ದು ಎನ್ನುವ ಭಾವ ಇಲ್ಲಿ ಯದು ಕಬ್ಬಿಣವೇ ವಾಸಿ.

ಮುಂದಿನ ಪಾಶುರದಲ್ಲಿ ಗಜೇಂದ್ರ ಭಕ್ತಿ ಯನ್ನು ವಿವರಿಸಿದ್ದಾರೆ ದೇವತೆಗಳು ಕಾಣದ ತೇಜಸ್ಸನ್ನು ಭಗವಂತ ಇಲ್ಲಿ ಬೆಳಗಿಸಿದ ಆನೆ ಮೊಸಳೆಯಿಂದ ಬಿಡಿಸಿಕೊಳ್ಳಲು ಹೆಣಗುತ್ತಿದೆ. ಭಗವಂತನಲ್ಲಿ ಮೊರೆಯಿಡುತ್ತಿದೆ ಮೊಸ ಳೆಯ ಮೇಲಿನ ಸಿಟ್ಟಿನಿಂದ ಭಗವಂತ ಓಡೋಡಿ ಬಂದು ಬಿಡಿಸುತ್ತಾನೆ. ಅಂತಹ ಕರುಣಾಳು ಆತ ಅವನು ನಮ್ಮನ್ನು ರಕ್ಷಿಸಲು ಸದಾಸಿದ್ಧ ನಾಗಿದ್ದರೂ ಕೂಡ ನಾಯಿಯಂತೆ ನೀಚರಾದ ನರರು ತಮ್ಮ ಅಪರಾಧಗಳನ್ನು ಪರಿಗಣಿಸದೆ ಆತ ಮುಂದೆ ಬಂದರೂ ಸಹ ಅಲಕ್ಷಿಸುತ್ತಾರೆ ಅಯ್ಯೋ ಜನ್ಮವೇ! ಅವನ ಊಳಿಗವೆಸಗದೇ ಡವೇನು ? ಕೃತಜ್ಞತೆ ತೋರಿಸದೇಡವೇನು ? ಎಂದು ಕೇಳುತ್ತಾರೆ ಆಳ್ವಾರ್ ಅಳಿಲು ಆನೆ ಇವು ಗಳು ತಿರ್ಯಕ್ ಜಾತಿಯವು. ಬುದ್ಧಿ ತಿಳಿಯದ ಪ್ರಾಣಿಗಳು, ಮನುಷ್ಯ ಜನ್ಮ ಶ್ರೇಷ್ಠವೆನ್ನುವುದೇಕೆ ? ಭಗವಂತನು ನರನಿಗೆ ಜ್ಞಾನ ಬುದ್ಧಿ ವಿವೇಕಗ ಳನ್ನು ನೀಡಿದ್ದಾನೆಂಬುದರಿಂದಲ್ಲವೇ ? ಅಂತಹ ಪಶುಪ್ರಾಣಿಗಳಲ್ಲಿಯೂ ದಯೆ ತೋರುವ ಪರ ಮಾತ್ಮನು ನೀವು ಅವನಲ್ಲಿ ಮೊರೆಯಿಟ್ಟರೆ ಬರದೆ ಇರುವನೇ? ಆದರೆ ನಿಮಗೆ ಮೊರೆಯಿಡುವ ಬುದ್ಧಿಯೇ ಇಲ್ಲದೆ ಅವನನ್ನು ಅಲಕ್ಷಿಸುತ್ತಿದ್ದೀ ರಲ್ಲ ಎಂದು ಕೇಳುತ್ತಾರೆ ಆಳ್ವಾರ್

ದುಂಬಿಗಳಿಂದ ತುಂಬಿದ ಉದ್ಯಾನದ ಶ್ರೀರಂ ಗದಲ್ಲಿ ಮೆರೆಯುವ ಕಾಳಮೇಘದಂತೆ ತನು ಕಾಂತಿಯುಳ್ಳ ರಂಗನಾಥನೇ! ನಿನ್ನನ್ನು ದರ್ಶಿಸುವ ವಿಧಾನ ತಿಳಿಯದು ಮನುಷ್ಯಜಾತಿಯಲ್ಲಿಯೇ ಅತಿ ದುಷ್ಟನೂ ಮೂರ್ಖನೂ ಆಗಿ ನಿನ್ನ ಮುಂದೆ ನಿಂತಿದ್ದೇನೆ ಈ ರೀತಿ ನಿಂತಿರುವುದೂ ಅಹಂ ಭಾವಯುಕ್ತನಾಗಿ, ಇದೂ ಮೂರ್ಖತನದ ಪರ ಮಾವಧಿ ತಾನೆ. ಮೂರ್ಖರಲ್ಲಿ ಮೂರ್ಖನಾ ಗುವುದಿಲ್ಲವೇ ನಾನು ರಾವಣ ಮುಂತಾದವರು ಮೊದಲೇ ದುಷ್ಟರು, ಹಟಮಾರಿಗಳು, ಅದರ ಲ್ಲಿಯೂ ದೇವರನ್ನು ಎದುರಿಸಿ ನಿಂತದ್ದು ಮತ್ತೂ ಮೂರ್ಖತನವೇ ಸರಿ ಈ ರೀತಿಯ ಶತಮೂ ರ್ಖವರ್ಗಕ್ಕೆ ನಾನು ಸೇರಿರುತ್ತೇನೆ. ಇದಕ್ಕಿಂತ ಮೂರ್ಖತನ ಬೇರೇನು ಬೇಕು ಈ ವಿಚಾರವೂ ಸೊಗಸಾಗಿದೆ

ಆರ್ತು ವಂಡಲಂಬುಂ ಶೋಲೈ
ಅಣಿ ತಿರುವರಂಗಂ ತನ್ನುಳ್
ಕಾರ್ತಿರಳ ನ್ನೆಯಮೇನಿ
ಕಣ್ಣನೇ ಉನ್ನೈಕಾಣುಂ
ಮಾರ್ಗ ಮೇನ್ಗರಿಯ ಮಾಟ್ಟಾರ್
ಮನಿಶರಿಲ್ ದುರಿಶರಾಯ
ಮೂರ್ಖನೇನ್ ವಂದುನಿನ್ರೇನ್
ಮೂರ್ಖನೇನ್ ಮೂರ್ಖನೇನೇ

ಮುಂದಿನ ಪಾಶುರವೂ ಸೊಗಸಾಗಿದೆ -

ಮನತ್ತಿಲೋರ್ ತೂಯ್ಮೆಯಿಲ್ಲೈ
ವಾಯಿಲೊರ್ ಇನ್ನೊಲ್ಲಿಲ್ಲೈ
ಶಿನತ್ತಿನಾಲ್ ಶೆತ್ತಂ ನೋಕ್ಕಿ
ತೀವಿಳಿ ವಿಳಿವನ್ ವಾಳಂ
ಪುನತ್ತುಳಾಯ್ ಮಾಲೈಯಾನೇ
ಪೊನ್ನಿಶೂಳ್ ತಿರುವರಂಗಾ
ಎನಕ್ಕಿನಿ ಗತಿಯೇನ್ ಶೋಲ್ಲಾಯ್
ಎನ್ನೈಯಾಳುಡೈಯ ಕೋವೇ

ಮನಸ್ಸಿನಲ್ಲಿ ಶುದ್ಧತೆಯಿಲ್ಲ, ಬಾಯಲ್ಲಿ ಇನಿ ವಾತಿಲ್ಲ ಕೋಪ ಅಸೂಯೆಗಳ ಮಾತು ಗಳೇ ಬಾಯಲ್ಲಿ ಬರುತ್ತವೆ ಇಂತಹ ಹೀನ ನಿಗೆ ಗತಿಯಾರು? ತುಲಸೀಮಾಲಾಧಾರಿಯಾದ ಕಾವೇರೀ ಬಳಸಿನಿಂದ ಆವೃತನಾದ ಶ್ರೀರಂ ಗದ ಸ್ವಾಮಿಯೇ, ನನ್ನನ್ನು ಕೈಂಕರ್ಯಕ್ಕೆಂದು ಆರಿಸಿಕೊಂಡೆಯಾ ಸ್ವಾಮಿ ಎಂತಹ ಕರು ಣಾಳು ನೀನು ಸುಂದರ ವಾಗ್ದ್ವಾರೆ ಮೈಮರೆಸು ತ್ತದೆ. ತಿರುಮಂಗೈ ಆಳ್ವಾರ್ ತಮ್ಮ ಪೆರಿಯ



ತಿರುಮೊಳಿಯಲ್ಲಿ ನನ್ನನ್ನು ದಾಸನಾಗಿ ಮಾಡಿಕೊಂಡು ಅನುಗ್ರಹಿಸು ಎಂದು ಹಾಡುವ ಪರಿಯಂತೆಯೇ ಇಲ್ಲಿಯೂ ಭಾವ ವ್ಯಕ್ತವಾಗುತ್ತವೆ ಅನರ್ಹನಾದ ನನ್ನನ್ನು ನೀನು ಕೈಂಕರ್ಯಕ್ಕೆ ಕರೆದುಕೊಳ್ಳುತ್ತಿದ್ದೀಯಲ್ಲ ಎನ್ನುವ ಆಳ್ವಾರರ ಭಾವ ಎಂತಹ ಮನಸ್ಸನ್ನೂ ಕಲಕದೆ ಇರದು ನನ್ನದಾಗಿ ಭೂಮಿ ಇಲ್ಲ, ಕಾಣಿಯಿಲ್ಲ. ಬಂಧು ಬಾಂಧವರೂ ಯಾರೂ ಇಲ್ಲ ನೀಲಮೇಘಶ್ಯಾಮನಾದ ಕೃಷ್ಣನೇ ಕಾಪಾಡು ಎಂದು ಕೂಗುತ್ತಿದ್ದೇನೆ ನನಗೆ ಯಾರು ರಕ್ಷಕರಿದ್ದಾರೆ ರಂಗನಾಥ.

ತಪಸ್ವಿಗಳ ಸಂಬಂಧವಿಲ್ಲ, ಧನಸಂಪತ್ತಿಲ್ಲ ಉಪ್ಪು ನೀರು ಯಾರಿಗೂ ಪ್ರಯೋಜನಕ್ಕೆ ಬಾರದಂತೆ ನನ್ನ ಜನ್ಮವೂ ವ್ಯರ್ಥವೆನಿಸಿದೆ ಕೆಂದುಟಿಯ ಚೆಲುವೆಯರಿಗೂ ನಾನು ದೂರವಾಗುವಂತೆ ಕಳ್ಳನೆನಿಸಿದೆ. ಇಂತಹ ಜನ್ಮ ಏಕೆ? ಇದೂ ಒಂದು ಬಾಳ್ವೆಯೇ?

ಸತ್ಯಪಥದಿಂದ ದೂರವಾಗಿ ಬಿಚ್ಚಿದ ಮುಡಿಯಿಂದ ಕೂಡಿದ ಚೆಲುವೆಯರ ಹಿಂದೆ ಬಿದ್ದ ಅಸತ್ಯದಲ್ಲಿಯೇ ಪರಿಣಿತಿ ಹೊಂದಿ ಅನಾಥ, ಅನಾಶ್ರಯನಾದೆ. ಆದರೂ ನೀನು ಕೃಪೆ ಮಾಡಿಯೇ ತೀರುವೆ ಎಂಬ ಆಸೆಯಿಂದ ನಿನ್ನ ಮುಂದೆ ನಿಂತಿದ್ದೇವೆ. ಸುಳ್ಳರಲ್ಲಿ ನನಗಿಂತ ಹಿರಿಯ ಸುಳ್ಳರು ಯಾರೂ ಇಲ್ಲ

ನನ್ನ ಹೃದಯದಲ್ಲಿ ನೆಲೆಸಿರುವ ಸ್ವಾಮಿಯನ್ನು ಅರಿತುಕೊಳ್ಳುವ ಯೋಗ್ಯತೆ ನನಗಿಲ್ಲ ಅಂತಹ ಕಳ್ಳ ನಾದ ನಾನು ನಿನಗೆ ಕಿಂಕರನಾಗಿ ಕೈಂಕರ್ಯದ ವೇಷ ಹಾಕಿಕೊಂಡು, ಕೈಂಕರ್ಯಪರರೊಡನೆ ಇದ್ದುಕೊಂಡು ನನ್ನ ಮೋಸ ನಿನಗೆಲ್ಲಿ ತಿಳಿದು ಬಿಡುವುದೊ ಎಂದು ನಾಚಿಕೆಯಿಂದ ದೂರಸರಿದು ನಿಂತಿರುವೆನು ಅಯ್ಯೋ ನನ್ನ ಅವಿವೇಕಕ್ಕೆ ನನಗೇ ಪಕ್ಕೆ ಬಿರಿಯುವಂತೆ ನಗೆ ಬರುತ್ತಿದೆಯಲ್ಲದೆ ಏನು ಹೇಳಲಿ

ಧಾವಿಸಿ ಒಂದು ಕಾಲಕ್ಕೆ ಲೋಕವನ್ನೆಲ್ಲ ಅಳೆದಾಗ ಭೂಲೋಕವಾಸಿಗಳ ತಲೆಗಳ ಮೇಲೆ ನಿನ್ನ ಶ್ರೀಪಾದವು ಇಡಲ್ಪಟ್ಟು ಅನುಗ್ರಹಿಸುವಂತೆ ಆಯಿತಲ್ಲ. ಆದರೂ ನಿನ್ನನ್ನು ಬಿಟ್ಟು ಬೇರೊಬ್ಬನನ್ನು ನಾನು ಆಶ್ರಯಿಸುತ್ತಿರುವೆನಲ್ಲ ನನ್ನ ಅವಿವೇಕ ಎಂತಹದು ಆಗಿರಬೇಕು ಕೆಂಪುಬಣ್ಣದ ಸ್ವಾಮಿಯೇ, ಆಶ್ರಿತರಿಗೆ ಪಕ್ಷಪಾತಿಯೇ, ಅಮೃತವೇ, ನನ್ನ ಜೀವದ ಉಸಿರಾದ ಅಂತರಾತ್ಮನೇ, ನಾನು ಪಾಪಿ ಆದರೂ ಕೂಡ ನಿನ್ನನ್ನು ಬಿಟ್ಟು ಯಾರನ್ನು ನೆನೆಯಲಿ

ಮಳೆಯಿಂದ ರಕ್ಷಿಸಲು ಬೆಟ್ಟವನ್ನೇ ಎತ್ತಿ ಕಾಪಾಡಿದೆ. ಮಧುರವಾದ ಹೊನಲಿನಂತೆ ಇರುವವನೆ, ಭಕ್ತರಿಗೆ ಮಧುರ ಪ್ರವಾಹದಂತಿರುವವನೆ, ಜಿಂಕೆಯ ಕಣ್ಣಿನ ಸ್ತ್ರೀಯರ ಬಲೆಯಲ್ಲಿ ಸಿಲುಕಿದ ಈ ನಿಂದ್ಯನನ್ನು ಕಾಪಾಡದೆ ಇರುವೆಯಲ್ಲ - ನಿನ್ನನ್ನೇ ಕರೆಯುತ್ತಿದ್ದರೂ ಸುಮ್ಮನೆ ಇರುವೆಯಲ್ಲ ನ್ಯಾಯವೇ ? ಆದಿಮೂರ್ತಿಯಾದ ರಂಗನಾಥ ರಕ್ಷಿಸು

ಏನೇನೋ ಮಹತ್ತನ್ನು ಸಾಧಿಸಿಬಿಟ್ಟೆ ಎಂದು ಸಂಸಾ
ರದ ವ್ಯಾಮೋಹದಲ್ಲಿ ಮುಳುಗಿದೆ ವಿಷಯ ಸುಖದಲ್ಲಿ ಮೈಮರೆತೆ ಆ ಭ್ರಮೆ ಈಗ ನಿರಸನಗೊಂಡಿತು ನಿನ್ನ ಸ್ವರೂಪ ರೂಪಗಳನ್ನು ಅರಿತೆ ಇಂದ್ರಿಯಗಳನ್ನು ಸಂಯಮಕ್ಕೆ ಒಳಪಡಿಸಿದ್ದೇನೆ. ಭಗವತ್ಕೈಂಕರ್ಯದ ಭಾಗ್ಯ ಕಂಡೆ. ಉಪಾಯಾಂತರ ಬುದ್ಧಿಯ ಮೂಲೋತ್ಪಾಟನೆ ಮಾಡಿದಂತೆ ತಲೆಯನ್ನು ಮುಂಡನ ಮಾಡಿಕೊಂಡು, ನಿನ್ನ ಆಲಯದ ಬಾಗಿಲಿನಲ್ಲಿ ಸರ್ವದಾ ನಿಂತಿರುತ್ತ, ತಮ್ಮ ರಕ್ಷಣೆಗೆ ಸ್ವಪ್ರಯತ್ನವನ್ನೇನೂ ಮಾಡದ ಸೋಮಾರಿಗಳನ್ನು ಮಾತ್ರ ನೀನು ಮೆಚ್ಚುವಿಯೇನು?

ತಿರುಮಾಲೈ ದಿವ್ಯಪ್ರಬಂಧದಲ್ಲಿ ಈ ಪಾಶುರದಿಂದ ಒಂದು ತಿರುವು ಉಂಟಾಗಿದೆ. ಪಾಪಿಯಾದರೂ, ಅವಿವೇಕಿಯಾದರೂ, ನಿನ್ನ ನಾಮದ ಉಚ್ಚಾರಣೆಯಿಂದ ಒಮ್ಮೆ ಪ್ರಪನ್ನನಾಗಿ ನಿನ್ನಲ್ಲಿ ಶರಣಾಗತಿ ತೋರಿದರೆ, ನಿನ್ನ ಸ್ತುತಿ ಮಾಡಿದರೆ ಅಂತಹವನನ್ನು ನೀನು ಕಾಪಾಡುವೆ ಎನ್ನುವ ಆಳ್ವಾರ್ ಮೇಲಿನ ಪಾಶುರದಿಂದ ಆಲಯದ ಬಾಗಿಲಲ್ಲಿ ಕೈಂಕರ್ಯಪರರೆಂಬ ಸೋಗುಹಾಕಿಕೊಳ್ಳುವ ಸೋಮಾರಿಗಳನ್ನು ಹಂಗಿಸುತ್ತಾರೆ ಆದರೆ ಅವರ ಉದ್ದೇಶವೂ ಭಗವಂತನ ಪ್ರೇಮಕ್ಕೆ ಪಾತ್ರರಾಗುವುದೇ ಆಗಿರುವಾಗ ಭಗವಂತ ಅವರಿಗೂ ಒಲಿಯದೇಕು. ಮೇಲೆ ಮಾಡಿದ ಆಳ್ವಾರರ ವಾದ ಈಗೇಕೆ ವ್ಯತ್ಯಾಸಗೊಂಡಿತು ಎಂಬುದು ಅರ್ಥವಾಗದು

ನಿನ್ನ ಕೈಂಕರ್ಯದಲ್ಲಿ ಆದರವಿಲ್ಲದ ಚತುರ್ವೇದಗಳನ್ನು ಅರಿತ ಬ್ರಾಹ್ಮಣರಿಗಿಂತಲೂ, ಕೀಳಾದ ಚಂಡಾಲ ಜಾತಿಯಲ್ಲಿ ಜನಿಸಿದ್ದರೂ ನಿನ್ನ ಪಾದಗಳನ್ನು ಆಶ್ರಯಿಸುವ ಭಕ್ತರು ತಾ
ನಿನಗೆ ಪ್ರಿಯರು ಸರ್ವೇಶ್ವರ ಸೂಕ್ಷ್ಮತ್ವನಾ
ತುಲಸೀ ಮಾಲಾಧರನೇ ತಿಳಿಸು

ಲಕ್ಷ್ಮಿಯನ್ನು
ವಕ್ಷಃಸ್ಥಲದಲ್ಲಿ ಧರಿಸಿರುವವನೆ ಶ್ರೀರಂಗ ನಗ
ದಲ್ಲಿ ವಾಸ ಮಾಡುವ ಸ್ವಾಮಿಯೇ ಭೂಲೋ
ವಾಸಿಗಳೆಲ್ಲ ಗಡಗಡನೆ ನಡುಗುವಂತೆ ಕೊಲೆ
ಳನ್ನು ಎಸಗಿ, ದೆಂಕಿಯಿಂದ ಸುಟ್ಟು, ಪಾಪಗ
ಮೂಟೆಗಳನ್ನೇ ದೆನ್ನ ಮೇಲೆ ಹೊತ್ತು ಕೊಂ
ದ್ದರೂ ಕೂಡ, ನಿನ್ನನ್ನು ಮನಸ್ಸಿನಲ್ಲಿಯೇ ಧ್ಯಾ
ಸುತ್ತ ನೀನೇ ರಕ್ಷಕನೆಂದು ನೆರೆನಂಬುವವನನ
ಆ ಪಾಪಗಳು ಏನೂ ಮಾಡಲಾರವು.

ಎಂತಹ ದುಷ್ಟ ವೃತ್ತಿ ನಡೆಸುವವರೂ, ನ
ಸಲು ಪ್ರೇರೇಪಿಸುವವರೂ, ಆದರೂ ಕೂ
ದೇವತೆಗಳೇ ಅರಿಯದ ನಿನ್ನ ಗುಣವಿಶೇಷ
ಳನ್ನು ಅರಿತು ನಿನ್ನನ್ನು ಕರೆಯುವವರಾದರೆ ಅವ
ಭಕ್ತಿಭಾವ ವಿಶೇಷವಾದದ್ದೇ ಸರಿ ಅಂತಹವ
ಭುಕ್ತ ಶೇಷವನ್ನು ತಿಂದರೂ ಕೂಡ ನಮ
ಪರಿಶುದ್ಧಿ ಏರ್ಪಡುವುದು ಅಂತಹ ಮಹಿಮ
ವಂತರಾಗುತ್ತಾರೆ ಅವರುಗಳು ಅಕಳಂಕವಾ
ಶ್ರೋತ್ರೀಯ ವಂಶದಲ್ಲಿ ಜನಿಸಿ ಚತುರ್ವೇ
ಪಾರಂಗತರಾದ ಬ್ರಾಹ್ಮಣರೇ, ಕೀಳು ಕುಲದ
ಜನಿಸಿದರೂ ಕೂಡ ನಮಗೆ ಇವರು ದಾಸಭೂ
ತರಾದವರು ಎಂಬ ಅಭಿಮಾನಕ್ಕೆ ಒಳಗಾದಾ
ಅವರನ್ನು ಗೌರವಿಸಿರಿ ಅವರಿಗೆ ವಿಶ್ವಾಸ ನೀ
ಪಡೆಯಿರಿ, ಅವರಿಗೆ ತಿಳಿಯದ ವಿಚಾರವನ
ತಿಳಿಸಿ, ಅವರಿಗೆ ತಿಳಿದ ವಿಚಾರವನ್ನು ಕೇ
ನೀವು ತಿಳಿಯಿರಿ ಎನ್ನೆ ಸಪ್ತಪ್ರಾಕಾರ ಮಧ್ಯದ
ಮಲಗಿರುವ ಸ್ವಾಮಿಯೇ ನಿನಗೆ ಸಮಾನರಾ
ವರಂತೆಯೇ ಅವರನ್ನೂ ಗೌರವಿಸಲು ಅಪ್ಪ
ನೀಡುತ್ತಿರುವಂತೆ ಭಾವಿಸಲೇನು? ನಿಷ್ಠ ಬ್ರಾ
ಣರಾದರೂ ವೇದಪಾರಂಗತರೂ ಆದವರು
ಕೂಡ, ನಿನ್ನ ಭಕ್ತರಲ್ಲಿ ಜಾತಿಮತ ತಾರತಮ್ಯವನ
ಕಂಡು ಕೀಳಾಗಿ ನೋಡುವುದಾದರೆ ಆ ನಿಮಿ
ಷದಿಂದಲೇ ಅಂತಹ ಜನರು (ಉತ್ತಮರು)
ಚಂಡಾಳ ಸದೃಶರಾಗುವರು ಗಂಗೆಯಂ
ಹೆಣ್ಣನ್ನು ತಲೆಯಲ್ಲಿ ಸೂಡಿದವನೂ, ಬ್ರಹ್ಮನೂ
ನಿನ್ನನ್ನು ಕಾಣಲು ಹಲವು ಸಲ ಪ್ರಯತ್ನಿಸಿದರೂ
ನಿನ್ನನ್ನು ಕಾಣದೆ ನಾಚಿಕೆಯಿಂದ ಮುಖ ಮುಚ್ಚಿ
ಕೊಂಡಿರುವರು ಆದರೆ ಕೇವಲ ಆನೆಯೊಂದ
ಕರೆದರೆ ಅದು ಇದ್ದ ಕಡೆಗೇ ಓಡಿಬಂದು ಅದ

# ದೇವಾಲಯ ದರ್ಶನ

ಯಾತ್ರಿಕರು ತಮ್ಮ ವಿರಾಮ ಸಮಯದಲ್ಲಿ ತಿರುಪತಿಯ ಹಾಗೂ ಪರಿಸರದ ದೇವಾಲಯಗಳನ್ನು ನೋಡಿಬರಲು ಅನುಕೂಲವಾಗುವಂತೆ ತಿ ತಿ ದೇ ಪ್ರತ್ಯೇಕವಾದ ಪ್ಯಾಕೇಜ್ ಟೂರ್‌ಗಳನ್ನು ಏರ್ಪಡಿಸಿದೆ. ಅವುಗಳ ಪ್ರಯೋಜನ ಪಡೆಯಬೇಕೆಂದು ವಿನಂತಿಸಲಾಗಿದೆ.

## ಸ್ಥಳೀಯ ಆಲಯ ದರ್ಶನ :

ತಿರುಪತಿಯಲ್ಲಿನ ಹಾಗೂ ಸುತ್ತಮುತ್ತಲ ಆಲಯಗಳನ್ನು ತೋರಿಸಿಕೊಂಡು ಬರುವ ಸ್ಥಳೀಯ ಆಲಯದರ್ಶಿನಿಯಲ್ಲಿ ಹೊರಟು- ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ಶ್ರೀ ಕೋದಂಡರಾಮಸ್ವಾಮಿ ದೇವಾಲಯ, ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯ, ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಹರೇರಾಮ ಹರೇಕೃಷ್ಣ ಆಲಯ, ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಆಲಯ, ತೊಂಡವಾಡದ ಶ್ರೀ ಅಗಸ್ತ್ಯೇಶ್ವರಸ್ವಾಮಿ ಆಲಯ, ತಿರುಪತಿಯ ವಿಜ್ಞಾನಕೇಂದ್ರ (ಹತ್ತು ಗಂಟೆಯ ಆವರ್ತನದಲ್ಲಿ), ಗಳನ್ನು ನೋಡಬಹುದು

| | |
|---|---|
| **ಟಿಕೆಟ್ ಶುಲ್ಕ** | ಹಿರಿಯರಿಗೆ - ರೂ 20/- ಕಿರಿಯರಿಗೆ ರೂ 10/- |
| **ಬಸ್ ಹೊರಡುವ ಸ್ಥಳ** | ರೈಲ್ವೇ ನಿಲ್ದಾಣದ ಹಿಂಭಾಗದ ಸತ್ರಗಳು, ತಿರುಪತಿ |
| **ಬಸ್ ಹೊರಡುವ ಕಾಲ** | ಬೆಳಗ್ಗೆ 6 ಗಂಟೆ - ಬೆಳಗ್ಗೆ 10 ಗಂಟೆ ಮ - 3 ಗಂಟೆ. |

## ಪರಿಸರ ಆಲಯ ದರ್ಶನ :

ಪ್ರತಿ ದಿನವೂ ಬೆಳಗ್ಗೆ 6 ಗಂಟೆಗೆ ತಿರುಮಲೆಯ ಕೇಂದ್ರಸ್ವಾಗತ ಕಚೇರಿಯಿಂದಲೂ, 7 ಗಂಟೆಗೆ ತಿರುಪತಿಯ ಸತ್ರಗಳ ಬಳಿಯಿಂದಲೂ ಬಸ್ ಹೊರಟು-

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ, ಕಾರ್ವೇಟಿನಗರದ ಶ್ರೀ ವೇಣುಗೋಪಾಲ ಸ್ವಾಮಿ ಆಲಯ, ನಾರಾಯಣವನದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ, ನಾಗುಲಾಪುರದ ಶ್ರೀ ವೇದನಾರಾಯಣಸ್ವಾಮಿ ಆಲಯಗಳನ್ನು ನೋಡಿಕೊಂಡು ಮಧ್ಯಾಹ್ನ 1-30 ಕ್ಕೆ ತಿರುಪತಿಗೆ ಹಿಂದಿರುಗುತ್ತದೆ

**ಟಿಕೆಟ್ ಶುಲ್ಕ :** ಹಿರಿಯರಿಗೆ - ರೂ 50/-, ಕಿರಿಯರಿಗೆ - ರೂ 25/-

**ವಿವರಗಳಿಗೆ - ದೂರವಾಣಿ - 20991**

**ಕಾರ್ಯನಿರ್ವಹಣಾಧಿಕಾರಿ,**

ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

---

ಬಾಧೆಯನ್ನು ನಿತ್ಯಸೂರಿಗಳೂ ಆಶ್ಚರ್ಯ ಪಡುವಂತೆ ಪರಿಹಾರ ಮಾಡಿದೆ ಆದರೂ ನನ್ನಲ್ಲಿ ಕರುಣೆ ತೋರಿಸಲಿಲ್ಲವಲ್ಲ ನಿನಗೆ ದಯೆ ಇರುವುದೆ? ಇಲ್ಲವೇ ಇಲ್ಲ. ಹೀಗಿರುವಾಗ ನೀನು ಎಲ್ಲರಿಗೂ ಶರಣು ನೀಡುವೆಯೆಂದು ಹೇಗೆ ನಂಬುವುದು ನೀನೇ ಹೇಳು

ಆಳ್ವಾರರು ಈ ರೀತಿ ವಿಚಾರ ಧಾರೆಯನ್ನು ಹರಿಸಿ ತಮ್ಮ ಕೃತಿಗೆ ಮಂಗಳಾಶಾಸನವನ್ನು ಈ ರೀತಿ ಮಾಡುತ್ತಾರೆ -

ಸೊಗಸಾದ ಬಿಳಿಯ ವರ್ಣದ ಮಾಳಿಗೆ ಮನೆಗಳಿಂದ ಕಂಗೊಳಿಸುವ ಮಧುರಾನಗರದಲ್ಲಿ ಮದಿಸಿದ ಆನೆಯನ್ನು ಸಂಹರಿಸಿದ ಕೃಷ್ಣನೇ, ಶ್ರೀರಂಗದಲ್ಲಿ ಕಂಗೊಳಿಸುತ್ತಿರುವುದು. ಭಕ್ತರ ಮೇಲಿನ ಪ್ರೀತಿಯಿಂದ ಅವರನ್ನು ಅನುಗ್ರಹಿಸಲೆಂದೇ ಅಹಿತಲ್ಪದಲ್ಲಿ ಶಯನಿಸಿರುವ ಆತನನ್ನು ತುಲಸೀ ಕೈಂಕರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಪರಮ ಭಾಗವತರಾದ ಭಕ್ತಾಂಘ್ರಿರೇಣು ಎಂದು ಕರೆಯಲ್ಪಡುವ ಆಳ್ವಾರ್ ಅವರು ಹಾಡಿರುವ ಈ ಇನಿಮಾತುಗಳಲ್ಲಿ ಒಂದು ಪಕ್ಷ ತಪ್ಪುಗಳು ಏನಾದರೂ ಮಸುಳಿದ್ದಲ್ಲಿ ಅವು ನಮ್ಮ ಸ್ವಾಮಿಗೆ ರಸಿಸತಕ್ಕವುಗಳಾಗಿಯೇ ಇರುತ್ತವೆ ಅದರಲ್ಲಿ ಸಂದೇಹವಿಲ್ಲ, ಏಕೆಂದರೆ ಸ್ವಾಮಿ ಭಕ್ತರಲ್ಲಿ ಅಭಿಮಾನವುಳ್ಳವನು

ತಿರುಮಾಲೆಯ ಕಡೆಯ ಪಾಶುರಗಳಲ್ಲಿ ಉತ್ತಮರು ಕೀಳುಕುಲದವರು ಎನ್ನುವ ಪ್ರಸ್ತಾಪ ಏತಕ್ಕೆ ಇದ್ದಕ್ಕಿದ್ದಂತೆ ನುಸುಳಿಕೊಂಡಿತು ಎನ್ನುವುದು ಅಸ್ಪಷ್ಟ. ಅವರ ಕಾಲಕ್ಕೆ ಶ್ರೀ ವೈಷ್ಣವ ಧರ್ಮ ಇನ್ನೂ ರೂಪುಗೊಂಡಿರಲಿಲ್ಲ. ಇತರರೇನಾದರೂ ಈ ಹೊಸ ದಿಕ್ಕಿನಲ್ಲಿ ಹರಿಯುತ್ತಿದ್ದ ವೈಷ್ಣವ ಪಂಥಾನುಯಾಯಿಗಳಿಗೆ ಕಿರುಕುಳ ಕೊಟ್ಟು ಆಳ್ವಾರರು ಈ ರೀತಿಯ ಪ್ರತಿಕ್ರಿಯೆ ವ್ಯಕ್ತಪಡಿಸಿದರೋ ಎಂಬ ಭಾವನೆ ಏರ್ಪಡುತ್ತದೆ. ಆಳ್ವಾರರಲ್ಲಿ ಹಲವರು ಅಂದಿಗೆ ಕೆಳವರ್ಗದವರು ತಿರುಪ್ಪಾಣಿ ಆಳ್ವಾರ್, ತಿರುಮಂಗೈ ಆಳ್ವಾರ್, ನಮ್ಮಾಳ್ವಾರ್, ತಿರುಮಳಿಶೈ ಆಳ್ವಾರ್ - ಅವರುಗಳ ದಿವ್ಯಪ್ರಬಂಧಗಳನ್ನು ನಾಲಾಯಿರ ದಿವ್ಯಪ್ರಬಂಧಗಳಲ್ಲಿ ಸೇರಿಸಿ ಅನುಸಂಧಾನ ಮಾಡಲು ಶ್ರೀರಂಗದಲ್ಲಿ ತಿರುಮಂಗೈ ಆಳ್ವಾರರು ಅಧ್ಯಯನೋತ್ಸವವನ್ನು ಏರ್ಪಾಡು ಮಾಡಿದರೆಂದು ವರ್ತಮಾನ ಉಂಟು ಆಗೇನಾದರೂ ಉತ್ತಮರೆಂಬ ಜನ ಪ್ರತಿಭಟಿಸಿದರೇ ಎಂಬುದು ತಿಳಿದು ಬರುವುದಿಲ್ಲ ಅಂತೂ ಆಚಾರ್ಯ ರಾಮಾನುಜರು ಎಲ್ಲರನ್ನೂ ಶ್ರೀ ವೈಷ್ಣವರನ್ನಾಗಿ ಮಾಡಲು ಪ್ರಯತ್ನಿಸಿದರು. ಮೇಲು ಕೀಳು ಎಂಬ ಭಾವನೆ ಇರಕೂಡದು ಎಂದು ತಾವೇ ಆಚರಿಸಿ ತೋರಿಸಿದರು ಅಳಹಿಯ ಮಣವಾಳ ನಾಯನಾರ್ ಕೂಡ ತಮ್ಮ ಆಚಾರ್ಯ ಹೃದಯದಲ್ಲಿ ಈ ಭಾವನೆಯನ್ನು ಒತ್ತಿ ಹೇಳಿದ್ದಾರೆ ಆದರೆ ಈ ಭಾವನೆ ಆ ಕಾಲಕ್ಕೇ ಕಡೆಯಾದದ್ದು ದುರ್ದೈವದ ಸಂಗತಿಯೇ ಸರಿ.

ಒಟ್ಟಿನಲ್ಲಿ ತಿರುಮಾಲೈ ನಲವತ್ತೈದು ಪಾಶುರಗಳಿಂದ ಕೂಡಿದ ದಿವ್ಯಪ್ರಬಂಧ. ನಿತ್ಯಾನುಸಂಧೇಯವೆಂದು ನನ್ನ ಅಭಿಪ್ರಾಯ. ತಿರುಕ್ಕುರುಂದಾಂಡಗಮ್ ಮತ್ತು ತಿರುಮಾಲೈ ದಿವ್ಯಪ್ರಬಂಧಗಳಲ್ಲಿನ ಸಮಾನತತ್ವ ಹಿತ ಪುರುಷಾರ್ಥ ಪ್ರತಿಪಾದನವು ಆಪ್ಯಾಯಮಾನವಾಗಿರುವುದರಿಂದ ಈ ಎರಡು ದಿವ್ಯಪ್ರಬಂಧಗಳನ್ನು ತುಲನಾತ್ಮಕವಾಗಿ ನೋಡಬೇಕು

* * *

# ದಾನ

- ವಿದ್ವಾನ್ 'ರಘುಸುತ'

ಪ್ರಾಚೀನ ಭಾರತ ಪರಂಪರೆಯ ಒಂದು ಕಾಣಿಕೆ ಎಂದರೆ ದಾನ ಇದು ಸಾಮಾಜಿಕ ಜೀವನದ ಒಂದು ಭಾಗವಾಗಿತ್ತು ಸಮಾಜದ ಅಸಮತೆಯನ್ನು ನಿವಾರಿಸುವಲ್ಲಿ ದಾನವು ಒಂದು ಪ್ರಮುಖ ಅಸ್ತ್ರವಾಗಿತ್ತು ಉಳ್ಳವರು, ಇಲ್ಲದವರ ನಡುವಣ ಕಂದಕನ್ನು ತುಂಬಲು ಇದು ಪ್ರೇರಕ ಶಕ್ತಿಯಾಗಿತ್ತು ಪ್ರತಿಯೊಬ್ಬ ನಾಗರಿಕನು ಇದನ್ನು ತನ್ನ ಕರ್ತವ್ಯವೆಂಬಂತೆ ಅನುಸರಿಸುತ್ತಿದ್ದನು ಇದೊಂದು ಸಹಜಗುಣವೊ ಎನ್ನುವಂತೆ ಭಾರತೀಯ ಜನಮಾನಸದಲ್ಲಿ ಮೂಡಿಬಂದಿತ್ತು ಹಾಗೂ ಭಾರತೀಯರ ನೈತಿಕ ಹಿರಿಮೆಯನ್ನು ಎತ್ತಿ ಹಿಡಿದಿತ್ತು, ಇಂದಿಗೂ ಎತ್ತಿ ಹಿಡಿದಿದೆ

ಮಾನವ ಜೀವನದಲ್ಲಿ ದಾನ ಅತ್ಯಂತ ಮಹತ್ವ ಉಳ್ಳದ್ದು ಇದು ನಿತ್ಯಕರ್ಮದ ಒಂದು ಭಾಗವಾಗಿತ್ತು, ಈಗಲೂ ಆಗಿದೆ. ಪ್ರತಿದಿನ ವ್ಯಕ್ತಿಯು ಏನನ್ನಾದರೂ ದಾನ ಮಾಡಲೇಬೇಕು ಇದಕ್ಕೆ ಉದಾಹರಣೆ -

'ಶ್ರದ್ಧಯಾ ದೇಯಮ್,
ಹ್ರಿಯಾದೇಯಂ ಭಿಯಾದೇಯಮ್

ಎನ್ನುವ ಹೇಳಿಕೆ ಅಂದರೆ ಶ್ರದ್ಧೆಯಿಂದ ನೀಡಲಿ, ಲಜ್ಜೆಯಿಂದ ನೀಡಲಿ, ಭಯದಿಂದ ನೀಡಲಿ - ಯಾವುದೇ ರೀತಿಯಿಂದಲಾದರೂ ಮಾನವನು ದಾನ ನೀಡಲೇಬೇಕು ಅವನಿಗೆ ಇದು ತುಂಬಾ ಆವಶ್ಯಕ ದಾನವಿಲ್ಲದೆ ಮಾನವನು ಔನ್ನತ್ಯವನ್ನು ಪಡೆಯಲಾರನು

ಇಲ್ಲೊಂದು ಕಥೆಯನ್ನು ತಿಳಿಸಲೇಬೇಕು-

ಒಮ್ಮೆ ದೇವತೆಗಳ, ಮಾನವರ ಹಾಗೂ ಅಸುರರ ಔನ್ನತ್ಯವು ಅಧೋಗತಿಗೆ ಇಳಿದಿತ್ತು ಅದರಿಂದ ಅವರೆಲ್ಲರೂ ಪ್ರಜಾಪತಿ ಬ್ರಹ್ಮನ ಬಳಿಗೆ ಹೋಗಿ, ತಮ್ಮ ಕಷ್ಟವನ್ನು ಹೇಳಿಕೊಂಡರು ತಮ್ಮ ದುಃಖವನ್ನು ದೂರಮಾಡುವಂತೆ ಬೇಡಿಕೊಂಡರು

ಬ್ರಹ್ಮನು ಅವರಿಗೆ, ಒಂದು ಅಕ್ಷರವನ್ನು ಉಪದೇಶಮಾಡಿದ - 'ದ' ಎಂದು

ಸ್ವರ್ಗದಲ್ಲಿ ಭೋಗಲಾಲಸೆಯ ಸುಖ ಹೆಚ್ಚು ದೇವತೆಗಳು ವೃದ್ಧರಾಗುವಂತೆಯೇ ಇಲ್ಲ ಸದಾ ಯೌವ್ವನದಲ್ಲಿಯೇ ಇರುತ್ತಿದ್ದರು ಸದಾ ಇಂದ್ರಿಯ ಭೋಗಗಳಲ್ಲೆ ಲೀನವಾಗಿರುತ್ತಿದ್ದರು ಆದುದರಿಂದ ಕಾಮಲಾಲಸೆಯನ್ನು 'ದಮನ' ಮಾಡಿಕೊಳ್ಳುವಂತೆ 'ದ' ಅಕ್ಷರದ ಮುಖಾಂತರ ಬ್ರಹ್ಮನು ಬೋಧನೆ ಮಾಡಿದನು ಇದರಿಂದ ದೇವತೆಗಳು ತಾವು ಕೃತಕೃತ್ಯರಾದೆವೆಂದು ತಿಳಿದು, ನಮಸ್ಕಾರ ಮಾಡಿ ಹಿಂತಿರುಗಿದರು

ಸ್ವಭಾವತಃ ಅಸುರರು ಹಿಂಸಾ ಪ್ರವೃತ್ತಿಯವರು ಹಿಂಸೆ ಹಾಗೂ ಕ್ರೌರ್ಯ ಅವರ ಪ್ರತಿದಿನದ ನಡವಳಿಕೆಯಾಗಿತ್ತು ಅದರಂತೆ ಬ್ರಹ್ಮನು ಅವರು ತಮ್ಮ ದುಷ್ಕರ್ಮಗಳಿಂದ ದೂರವಿರುವಂತೆ 'ದ' ಅಕ್ಷರದ ಮುಖಾಂತರ ಇತರರಿಗೆ ದಯೆ ತೋರುವಂತೆ ಉಪದೇಶಿಸಿದರು ಬ್ರಹ್ಮನ ಈ ಆಜ್ಞೆಯು ಶಿರೋಧಾರ್ಯವೆಂದು ತಿಳಿದ ಅಸುರಗಣ ಅಲ್ಲಿಂದ ಹೊರಟುಹೋಯಿತು

ಮಾನವರು ಕರ್ಮಯೋನಿಗಳು ಇದರಿಂದ ಅವರು ಸದಾ ಲೋಭವಶರಾಗಿ, ಧನ ಸಂಗ್ರಹದಲ್ಲಿ ನಿರತರಾಗಿರುತ್ತಿದ್ದರು ಇದರಿಂದ ಬ್ರಹ್ಮನು ಆ ಲೋಭಿ ಮಾನವರಿಗೆ 'ದ' ಅಕ್ಷರದ ಮುಖಾಂತರ ಅವರ ಒಳ್ಳೆಯದಕ್ಕಾಗಿ 'ದಾನ' ಮಾಡುವಂತೆ ತಿಳಿಸಿದ ಮಾನವರೂ ಕೂಡ ಬ್ರಹ್ಮನ ಈ ಆಜ್ಞೆಯನ್ನು ಶಿರಸಾವಹಿಸಿ, ಪಾಲಿಸಲು ಸ್ವೀಕರಿಸಿ ಅಲ್ಲಿಂದ ಹೊರಟುಹೋದರು

ಈ ಕಥೆಯ ಪ್ರಕಾರ ಮಾನವರು ತಾವು ಅಭ್ಯುದಯವನ್ನು ಪಡೆಯಬೇಕಾದರೆ ದಾನ ಮಾಡುವುದು ಅವಶ್ಯಕವಾಯಿತು

ವಿಭವೋ ದಾನ ಶಕ್ತಿಶ್ಚ
ಮಹತಾಂ ತಪಸಾಂ ಫಲಮ್

ಅಂದರೆ ಐಶ್ವರ್ಯ ಹಾಗೂ ದಾನ ನೀಡುವ ಸಾಮರ್ಥ್ಯ (ಮಾನಸಿಕ ಉದಾರತೆ) - ಇವೆರಡೂ ಮಹಾನ್ ತಪಸ್ಸಿನ ಫಲವಾಗಿಯೇ ಲಭಿಸುತ್ತವೆ ಐಶ್ವರ್ಯ ಪಡೆಯುವುದೇನೊ ಸಾಮಾನ್ಯ ವಿಷಯವಾಗಿರಬಹುದು ಹೇಗಾದರೂ ಅದನ್ನು ಸಾಧಿಸಬಹುದು, ಪಡೆಯಬಹುದು ಆದರೆ ಆ ಧನವನ್ನು ಬೇರೆಯವರಿಗೆ ದಾನ ಮಾಡುವುದು ಆಯಾ ಮಾನವನ ಮನಸ್ಸಿನ ಉದಾರತೆಯನ್ನು ಅವಲಂಬಿಸಿರುತ್ತದೆ ಈ ರೀತಿಯ ಭಾವನೆಯು ಜನ್ಮ - ಜನ್ಮಾಂತರಗಳ ಪುಣ್ಯವಿಶೇಷದಿಂದಷ್ಟೇ ಲಭಿಸುತ್ತದೆ.

ಇಲ್ಲಿ ಮಹಾಭಾರತದ 'ಯುಧಿಷ್ಠಿರನ ಸಮಯದ ಕಥೆಯನ್ನು' ನೆನಪಿಸಿಕೊಳ್ಳುವುದು ಅವಶ್ಯಕವಾಗುತ್ತದೆ

ಒಮ್ಮೆ ಒಬ್ಬ ಬ್ರಾಹ್ಮಣನ ತಂದೆ ಮರಣಿಸಿದ. ಅವನು ತನ್ನ ತಂದೆಯ ದೇಹಸಂಸ್ಕಾರವನ್ನು ಶ್ರೀಗಂಧದ ಮರದಿಂದ ನೆರವೇರಿಸಬೇಕೆಂದುಕೊಂಡ ಅದರಂತೆ ಯುಧಿಷ್ಠಿರನ ಬಳಿಗೆ ಹೋಗಿ ತನ್ನ ತಂದೆಯ ಶವದ ದಹನಸಂಸ್ಕಾರಕ್ಕೆ ಸಾಕಾಗುವಷ್ಟು ಶ್ರೀಗಂಧದ ಚಕ್ಕೆಗಳನ್ನು ಕೊಡುವಂತೆ ಕೇಳಿದ ಶ್ರೀಗಂಧದ ಚಕ್ಕೆಗಳು ಯುಧಿಷ್ಠಿರನ ಬಳಿ ಸಾಕಷ್ಟು ಇತ್ತು ಅದರ ಕೊರತೆಯೇನೂ ಇರಲಿಲ್ಲ ಅದನ್ನು ಬ್ರಾಹ್ಮಣನಿಗೆ ಕೊಡಬೇಕೆಂಬ ಇಷ್ಟವೂ ಅವನಿಗೆ ಇತ್ತು. ಆದರೆ ಆ ಸಮಯದಲ್ಲಿ ಧಾರಾಕಾರವಾಗಿ ಮಳೆ ಸುರಿಯುತ್ತಿದ್ದುದರಿಂದ ಸಂಪೂರ್ಣ ಶ್ರೀಗಂಧದ ಸೌದೆ ನೆನೆದು, ತೊಪ್ಪೆಯಾಗಿತ್ತು ನೆನೆದ ಸೌದೆಯಿಂದ ದಹನಸಂಸ್ಕಾರ ಸಾಧ್ಯವಾಗುತ್ತಿರಲಿಲ್ಲ ಅಂತಹ ಸೌದೆಯನ್ನು ನೋಡಿ ಬ್ರಾಹ್ಮಣನು ನಿರಾಶೆಯಿಂದ ಹಿಂತಿರುಗಿದ

ನಂತರ ಆ ಬ್ರಾಹ್ಮಣನು ಇದೇ ಕಾರ್ಯಕ್ಕಾಗಿ ಕರ್ಣನ ಬಳಿಗೆ ಹೋದ. ಅವನಲ್ಲಿ ತಾನು ಬಂದ ಕಾರಣವನ್ನು ಬ್ರಾಹ್ಮಣನು ನಿವೇದಿಸಿಕೊಂಡ ಅವನ ಬಳಿಯಲ್ಲಿದ್ದ ಸೌದೆಯೂ ನೆನೆದು ಹೋಗಿತ್ತು ಆದುದರಿಂದ ಅದನ್ನು ಉಪಯೋಗಿಸುವುದಕ್ಕೆ ಆಗುತ್ತಿರಲಿಲ್ಲ ಏನು ಮಾಡುವುದೆಂದು ಕರ್ಣನು ಯೋಚಿಸಿದ. ಅವನಿಗೆ ದಾನ ಮಾಡುವ ವಾಂಛೆ ಹೃದಯದ ತಳದಿಂದ ಮೂಡಿ ಬಂದಿತ್ತು. ಇನ್ನೆಲ್ಲಿ ಶ್ರೀಗಂಧದ ವಸ್ತುಗಳು ಸಿಗುವುದೆಂದು ಯೋಚಿಸಿದ. ಆಗ

ಅವನಿಗೆ ತನ್ನ ಎದುರಿಗಡೆ ಇದ್ದ ಸಿಂಹಾಸನ ಕಂಡುಬಂದಿತು ಅಂದಿನ ದಿನಗಳಲ್ಲಿ ಸಿಂಹಾಸನ ವನ್ನು ಶ್ರೀಗಂಧದ ಮರದಿಂದ ನಿರ್ಮಾಣಮಾಡಿ, ನಂತರ ಅವರವರ ಯೋಗ್ಯತೆಗೆ ತಕ್ಕಂತೆ ಬೆಳ್ಳಿ, ಚಿನ್ನದ ತಗಡುಗಳನ್ನು ಹೊದಿಸಿ, ವಜ್ರ ವೈಡೂರ್ಯಗಳನ್ನು ಹುದುಗಿಸುತ್ತಿದ್ದರು

ಆ ಸಿಂಹಾಸನ ಬೆಲೆ ಬಾಳುವಂತಿದ್ದರೂ, ಕರ್ಣನಿಗೆ ಅದರ ಕಡೆ ಗಮನವಿರಲಿಲ್ಲ ಮನೆ ಬಾಗಿಲಿಗೆ ಬಂದ ಬ್ರಾಹ್ಮಣನನ್ನು ತೃಪ್ತಿಗೊಳಿಸುವುದೇ ಅವನ ಗುರಿಯಾಗಿತ್ತು ಅಂತೆಯೇ ಸಿಂಹಾಸನದಲ್ಲಿನ ಶ್ರೀಗಂಧದ ಹಲಗೆಗಳನ್ನು ಬ್ರಾಹ್ಮಣನ ಕಾರ್ಯಕ್ಕೆ ನೀಡಲು ನಿಶ್ಚಯಿಸಿದ. ಆ ಸೌದೆಯೂ ಕೂಡ ಒಣಗಿದ್ದುದೇ ಆಗಿದ್ದು, ಬ್ರಾಹ್ಮಣನ ಕಾರ್ಯಕ್ಕೆ ಸೂಕ್ತವಾದದ್ದಾಗಿತ್ತು

ಅಂತೆಯೇ ಆ ಕೂಡಲೇ ಮರದ ಕೆಲಸದವರನ್ನು ಕರೆಯಿಸಿ, ಸಿಂಹಾಸನದಲ್ಲಿರುವ ಶ್ರೀಗಂಧದ ಭಾಗಗಳನ್ನು ಬಿಡಿಸಿ ಕೊಡುವಂತೆ ಆಜ್ಞಾಪಿಸಿದ. ಶ್ರೀಗಂಧದ ಭಾಗಗಳನ್ನು ಬೇರ್ಪಡಿಸಲಾಯಿತು ಕರ್ಣನು ಅದನ್ನು ಬ್ರಾಹ್ಮಣನಿಗೆ ನೀಡಿದ. ಬ್ರಾಹ್ಮಣನು ಆ ಸೌದೆಯನ್ನು ಉಪಯೋಗಿಸಿ, ತನ್ನ ತಂದೆಯ ದಹನ ಸಂಸ್ಕಾರವನ್ನು ಮುಗಿಸಿದ ಕರ್ಣನ ಮನಸ್ಸಿಗೆ ಇದನ್ನು ಆಲಿಸಿ ತೃಪ್ತಿಯೂ ಆಯಿತು. ತನ್ನ ಸತ್ಕಾರ್ಯದಲ್ಲಿ ಅವನು ಸಫಲನಾಗಿದ್ದ

ಯುಧಿಷ್ಠಿರನ ಬಳಿಯಲ್ಲೂ ಶ್ರೀಗಂಧಮರದಿಂದ ಮಾಡಿದ ಸಿಂಹಾಸನವಿತ್ತು ಆದರೆ ಅವನಲ್ಲಿ ಸಮಯಪ್ರಜ್ಞೆ ಮತ್ತು ಮಾನಸಿಕ ಉದಾರತೆ ಇರಲಿಲ್ಲ ಅದರಿಂದ ಅವನು ಈ ದಾನದ ಪ್ರಕ್ರಿಯೆಯಿಂದ, ಪುಣ್ಯಕಾರ್ಯದಿಂದ ವಂಚಿತನಾದ. ಆ ಶ್ರೇಯಸ್ಸು ಕರ್ಣನಿಗೆ ಲಭಿಸಿತು ಈ ಕಾರಣದಿಂದಲೇ ಕರ್ಣನು 'ದಾನವೀರ'ನೆಂದು ಹೆಸರು ಪಡೆದ

ಶಾಸ್ತ್ರಗಳಲ್ಲಿ ದಾನ ಮಾಡುವುದರ ಕಾಲ, ಸ್ಥಳ ಹಾಗೂ ಪಾತ್ರಾಪಾತ್ರಗಳ ವಿಸ್ತಾರವಾದ ವಿವರಗಳನ್ನು ನೀಡಲಾಗಿದೆ.

ದಾನವನ್ನು ಒಂದು ಶುಭಸ್ಥಾನದಲ್ಲಿ ನೀಡಬೇಕು. ಉದಾ ಯಾತ್ರಾಸ್ಥಳ ಹಾಗೂ ತೀರ್ಥಕ್ಷೇತ್ರಗಳು ಇದನ್ನು ಒಳ್ಳೆಯ ಮುಹೂರ್ತದಲ್ಲಿ ಸತ್ಪಾತ್ರನಿಗೆ ದಾನ ಮಾಡಬೇಕು ಇದು ಉಚಿತವಾದುದೂ ಹೌದು ಇದಲ್ಲದೆ ಸಮಯಾಸಮಯದಲ್ಲೂ ಅವಶ್ಯಕತೆ ಇದ್ದಾಗ ಅಪಾತ್ರರಿಗೂ ದಾನ ಮಾಡಬಹುದು ಉದಾಹರಣೆಗೆ ಒಂದು ವಿಪತ್ತಿನ ಸಮಯ ಭೂಕಂಪವಾಗಿರುವ ಅಥವಾ ಅಪಘಾತವಾಗಿರುವ ಸಮಯ ಆಗ ಪಾತ್ರಾಪಾತ್ರ ವಿವೇಚನೆ ಇರಕೂಡದು ಆಪತ್ಕಾಲದಲ್ಲಿ ಪೀಡಿತರಾದ ಸಮುದಾಯಕ್ಕೆ ಆಹಾರ, ವಸತಿ ವ್ಯವಸ್ಥೆ, ಭೂಮಿ ನೀಡುವಿಕೆ - ಇತ್ಯಾದಿಗಳಲ್ಲಿ ಯಾವುದು ಅವಶ್ಯಕವೊ ಅದರ ಸಹಾಯವನ್ನು ನೀಡಬೇಕು ಅದು ಆಗತ್ಯವೂ ಹೌದು ಈ ರೀತಿಯ ದಾನಗಳು ವ್ಯಕ್ತಿಗತ ಹಾಗೂ ಸಾಮೂಹಿಕ - ಎರಡೂ ರೀತಿಯದ್ದಾಗಿರುತ್ತವೆ

## ದಾನದ ವಿವಿಧ ಸ್ವರೂಪ

ಶಾಸ್ತ್ರ ಹಾಗೂ ಪುರಾಣಗಳಲ್ಲಿ ದಾನದ ವಿಭಿನ್ನ ರೂಪಗಳನ್ನು ವರ್ಣಿಸಲಾಗಿದೆ-

೧. **ದೈನಂದಿನ ದಾನ :** ವ್ಯಕ್ತಿಯ ಜೀವನದಲ್ಲಿ ಯಾವ ರೀತಿಯಲ್ಲಿ ಸತ್ಕರ್ಮವು ಸಂಪನ್ನಗೊಂಡಿರುತ್ತದೆಯೊ ಅದೇ ರೀತಿಯಲ್ಲಿ ಪ್ರತಿದಿನವೂ ನಿತ್ಯ ನೈಮಿತ್ತಿಕ ಕರ್ಮದಂತೆ ದಾನವನ್ನೂ ನಿಯಮಪೂರ್ವಕವಾಗಿ ನಡೆಯಿಸಿಕೊಂಡು ಬರಬೇಕು ಈ ರೀತಿಯಲ್ಲಿ ಅನ್ನದಾನಕ್ಕೆ ವಿಶೇಷ ಮಹತ್ವವನ್ನು ನೀಡಲಾಗಿದೆ. ಮನೆಯ ಬಳಿ ಬಂದವರಿಗೆ ಅನ್ನದಾನ ಮಾಡುವುದು ತುಂಬಾ ಮುಖ್ಯ

೨. **ವಿಶೇಷ ದಿನಗಳಲ್ಲಿ ದಾನ :** ಬೇರೆ ಬೇರೆ ಪರ್ವದಿನಗಳಲ್ಲಿ ಹಾಗೂ ವಿಶೇಷ, ಸಂದರ್ಭಗಳಲ್ಲಿ ದಾನ ಮಾಡುವ ರೂಢಿ ಇದೆ ಇದನ್ನು 'ನೈಮಿತ್ತಿಕ ದಾನ' ವೆಂದೂ ಕರೆಯಲಾಗುತ್ತದೆ ಶಾಸ್ತ್ರ - ಪುರಾಣಗಳಲ್ಲಿ ಇದರ ಸವಿಸ್ತಾರ ವಿವರವಿದೆ. ಸೂರ್ಯಗ್ರಹಣ ಅಥವಾ ಚಂದ್ರಗ್ರಹಣದ ಸಮಯಗಳಲ್ಲಿ ತಾಮ್ರ ಅಥವಾ ಬೆಳ್ಳಿಯ ಪಾತ್ರೆಗಳಲ್ಲಿ ತುಂಬಿದ ಕರಿ ಎಳ್ಳು ಹಾಗೂ ಅದರೊಂದಿಗೆ ಚಿನ್ನ ಹಾಗೂ ಹಣವನ್ನಿಟ್ಟು ಮಾಡುವ ದಾನ, ಏಕಾದಶಿ, ಅಮಾವಾಸ್ಯೆ, ಪೌರ್ಣಿಮೆ, ಸಂಕ್ರಾಂತಿ ಹಾಗೂ ವ್ಯತೀಪಾತ - ಇತ್ಯಾದಿ ಪುಣ್ಯಕಾಲಗಳಂದು ನೀಡುವ ದಾನವು ವಿಶೇಷ ಮಹತ್ವವನ್ನು ಹೊಂದಿರುತ್ತದೆ. ಈ ಸಂದರ್ಭಗಳಲ್ಲಿ ಅನ್ನದಾನ, ದ್ರವ್ಯ (ಹಣ) ದಾನ, ಸ್ವರ್ಣದಾನ, ಭೂಮಿದಾನ ಹಾಗೂ ಗೋದಾನಗಳನ್ನು ಮಾಡಲಾಗುತ್ತದೆ ಇದು ತುಂಬಾ ಮಹತ್ವವನ್ನು ಹೊಂದಿರುತ್ತದೆ

೩. **ಸಾಂದರ್ಭಿಕ ದಾನ :** ಕೆಲವೊಂದು ಇಚ್ಛೆಗಳ ಪೂರೈಕೆಗಾಗಿ ದಾನ ಮಾಡಲಾಗುತ್ತದೆ. ಉತ್ತಮ ಪುತ್ರನಾಗಲೆಂದೂ, ಒಳ್ಳೆಯ ಕಾರ್ಯವಾಗಲೆಂದೂ - ಇಂತಹ ದಾನಗಳನ್ನು ಮಾಡಲಾಗುತ್ತದೆ. ಇವುಗಳಲ್ಲಿ ಗೋದಾನ, ತುಲಾದಾನ, ಭೂಮಿದಾನ, ಸ್ವರ್ಣದಾನ, ಘಟದಾನ - ಇತ್ಯಾದಿಗಳು ಅಷ್ಟ, ದಶ ಹಾಗೂ ಷೋಡಶ ಮಹಾದಾನಗಳ ರೂಪದಲ್ಲಿ ಪರಿಗಣಿಸಲ್ಪಟ್ಟು ನೀಡಲಾಗುತ್ತದೆ ಇವು ಕಾಮ್ಯ (ಕೋರಿಕೆಗಳ ಸಲ್ಲಿಕೆ) ಗಳದ್ದಾದರೂ ಅವನ್ನು ನಿಸ್ವಾರ್ಥತೆಯಿಂದ, ಪರಮಾತ್ಮನನ್ನು ಪ್ರಸನ್ನಗೊಳಿಸುವುದಕ್ಕಾಗಿ, ಅವುಗಳ ಭಗವದರ್ಪಣ ಬುದ್ಧಿಯಿಂದ ನೀಡಿದ್ದೇ ಆದರೆ, ಅದರಿಂದ ಭಗವತ್ ಪ್ರಾಪ್ತಿ ಉಂಟಾಗುತ್ತದೆ

೪. **ಉಪಕಾರ ದೃಷ್ಟಿಯ ದಾನ :** ಪರೋಪಕಾರ ದೃಷ್ಟಿಯನ್ನು ಇರಿಸಿಕೊಂಡು ದಾನ ನೀಡುವ ಪರಂಪರೆ ಭಾರತದಲ್ಲಿ ರೂಢಿಯಲ್ಲಿದೆ. ಇದು ಸಾಮಾನ್ಯವಾಗಿ 'ಬಹುಜನ ಹಿತಾಯ', 'ಬಹುಜನ ಸುಖಾಯ', ದೃಷ್ಟಿಯಿಂದ ಮಾಡುವಂತಹ ದಾನ ದೇವಸ್ಥಾನ, ವಿದ್ಯಾಸಂಸ್ಥೆ, ಆಸ್ಪತ್ರೆ (ಔಷಧಾಲಯ), ಭೋಜನಾಲಯ (ಅನ್ನದಾನ ಕ್ಷೇತ್ರ), ಅನಾಥಾಲಯ, ಗೋಶಾಲೆ, ಧರ್ಮಛತ್ರ, ಬಾವಿ, ಅರವಟ್ಟಿಗೆ, ಕೊಳ - ಇತ್ಯಾದಿ ಸಾರ್ವಜನಿಕರಿಗೆ ಉಪಯೋಗವಾಗುವಂತಹ ಸ್ಥಳಗಳ ನಿರ್ಮಾಣ, ಅದಕ್ಕೆ ಧನ (ವಸ್ತುಗಳ) ಸಹಾಯ ಮುಂತಾದವುಗಳ ದಾನ ಮಾಡುವಿಕೆ ಈ ವರ್ಗದಲ್ಲಿ ಬರುತ್ತದೆ ಇದಕ್ಕೆ ನ್ಯಾಯೋಪಾರ್ಜಿತ ಧನವನ್ನೇ ನೀಡಬೇಕು ಇಂತಹವುಗಳಿಂದ ಯಶಸ್ಸು, ಕೀರ್ತಿಗಳು ಬರುತ್ತದೆ ಎಂದು ನಿರೀಕ್ಷಿಸಬಾರದು ಇವನ್ನೆಲ್ಲ ಭಗವತ್ ಪ್ರೀತ್ಯರ್ಥವಾಗಿ ಮಾಡಬೇಕು ಆಗಲೇ ಅಂತಹ ದಾನವು ಸಫಲವಾಗುವುದು

## ಯಾವ ಧನವನ್ನು ಎಷ್ಟು ದಾನ ಮಾಡಬೇಕು?

ನ್ಯಾಯವಾಗಿ, ಸಂಪಾದಿಸಿದ ಹಣದಲ್ಲಿ ಹತ್ತನೇ ಒಂದರಷ್ಟು ಭಾಗವನ್ನು ಬುದ್ಧಿವಂತ, ಸಹೃದಯ ಮಾನವನಿಗೆ ದಾನ ಮಾಡುವುದರಿಂದ ಪರಮಾತ್ಮನು ಪ್ರಸನ್ನಗೊಳುತ್ತಾನೆ ಇದು ಸತ್ಪುರುಷರ ಕರ್ತವ್ಯ

ನ್ಯಾಯೋಪಾರ್ಜಿತ ವಿತ್ತಸ್ಯ
ದಶಮಾಂಶೇನ ಧೀಮತಃ
ಕರ್ತವ್ಯೋ ವಿನಿಯೋಗಶ್ಚ
ಈಶ್ವರ ಪ್ರೀತ್ಯರ್ಥಮೇವ ಚ
(ಸ್ಕಂದಪುರಾಣ)

ಹೀಗೆ ಮಾಡುವುದರಿಂದ ದಾನ ಮಾಡಿದವನಿಗೆ ಪುಣ್ಯವು ಲಭಿಸುತ್ತದೆ

ಅನ್ಯಾಯದ ಮಾರ್ಗದಿಂದ ಸಂಪಾದಿಸಿದ ಹಣವನ್ನು ದಾನ ಮಾಡುವುದರಿಂದ ಯಾವುದೇ ಪುಣ್ಯವೂ ಲಭಿಸುವುದಿಲ್ಲ ಇದು 'ನ್ಯಾಯೋಪಾರ್ಜಿತ ವಿತ್ತಸ್ಯ' ಎನ್ನುವ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ ದಾನ ನೀಡುತ್ತೇನೆಂಬ ದುರಭಿಮಾನವು ನೀಡುವವನಲ್ಲಿ ಇರಬಹುದು ಇದೇ ರೀತಿಯಲ್ಲಿ ದಾನ ತೆಗೆದುಕೊಳ್ಳುವವನ ಮನಸ್ಸಿನಲ್ಲಿಯೂ ತಾನು ಉಪಕೃತನಾಗುತ್ತಿರುವೆನೆಂಬ ಭಾವ ಇರಬಾರದು ಆದುದರಿಂದಲೇ ಈ ಶ್ಲೋಕದಲ್ಲಿ 'ಕರ್ತವ್ಯ' ಎನ್ನುವ ಪದವನ್ನು ಪ್ರಯೋಗ ಮಾಡಲಾಗಿದೆ ಅಂದರೆ ಹಣದ ಸಂಪಾದನೆಯಲ್ಲಿ ಇಷ್ಟು ಭಾಗ ದಾನ ಮಾಡಬೇಕು ಎನ್ನುವುದು ಮಾನವ ಕರ್ತವ್ಯವಾಗುತ್ತದೆ

ಮನುಷ್ಯನ ಮುಖ್ಯ ಗುರಿ ಪರಮಾತ್ಮನನ್ನು ಸಂತೋಷಗೊಳಿಸುವುದೇ ಆಗಿರಬೇಕು ಆದುದರಿಂದ ದಾನ ರೂಪದ ಕರ್ತವ್ಯವನ್ನು ಪಾಲಿಸುತ್ತಾ ಭಗವತ್ ಪ್ರೀತಿಯನ್ನು ಗಳಿಸುವುದು ತುಂಬಾ ಆವಶ್ಯಕ. ಆದುದರಿಂದ 'ಕರ್ತವ್ಯೋ ವಿನಿಯೋಗಶ್ಚ ಈಶ್ವರ ಪ್ರೀತ್ಯರ್ಥಮೇವ ಚ' ಎನ್ನುವ ಪದಗಳನ್ನು ಈ ಶ್ಲೋಕದಲ್ಲಿ ಪ್ರಯೋಗಿಸಲಾಗಿದೆ.

ಓರ್ವ ವ್ಯಕ್ತಿಯ ಬಳಿ ೧೦೦೦ ರೂ.ಗಳು ಇದೆ ಎಂದಿಟ್ಟುಕೊಳ್ಳೋಣ. ಅದರಲ್ಲಿ ಹತ್ತನೇ ಒಂದು ಭಾಗ ಅಂದರೆ ೧೦೦ ರೂ.ಗಳನ್ನು ದಾನ ಮಾಡಿ, ಉಳಿದ ೯೦೦ ರೂ.ಗಳನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳುವುದರಿಂದ ದಾನದಲ್ಲಿ ಮಮತೆ ಹಾಗೂ ಆಸಕ್ತಿಗಳು ಹುಟ್ಟುತ್ತವೆ ಹೀಗೆ ಮಾಡುವುದರಿಂದ ಅಂತಃಕರಣದಲ್ಲಿ ಪರಿಶುದ್ಧತೆ ಉಂಟಾಗಿ, ದಾನದ ಬಗ್ಗೆ ಉತ್ತಮ ದೃಷ್ಟಿ ನಿರ್ಮಾಣವಾಗುತ್ತದೆ ಇದರಿಂದ ವೈಕುಂಠಲೋಕದ ಪ್ರಾಪ್ತಿಯೂ ಆಗುತ್ತದೆ.

ಅನ್ಯಾಯದ ಸಂಪಾದನೆಯಿಂದ ಮಾಡಿದ ಶುಭಕಾರ್ಯಗಳು ವ್ಯರ್ಥವಾಗುತ್ತದೆ ಎಂದು ದೇವೀಭಾಗವತದಲ್ಲಿ ಸ್ಪಷ್ಟಪಡಿಸಿದೆ ಇದರಿಂದ ಇಹಲೋಕದ ಕೀರ್ತಿಯೂ ಲಭಿಸುವುದಿಲ್ಲ, ಪರಲೋಕದ ಪಾರಮಾರ್ಥಿಕವೂ ಪ್ರಾಪ್ತವಾಗುವುದಿಲ್ಲ

ಅನ್ಯಾಯೋಪಾರ್ಜಿತೇನೈವ
ದ್ರವ್ಯೇಣ ಸುಕೃತಂ ಕೃತಮ್
ನ ಕೀರ್ತಿರಿಹಲೋಕೇ ಚ
ಪರಲೋಕೇ ಚ ತತ್ಫಲಮ್
(ದೇವೀಭಾಗವತ ೩-೧೨-೮)

ಸಂಪಾದಿಸಿದ ಹಣದಲ್ಲಿ ಹತ್ತನೇ ಒಂದು ಭಾಗ ದಾನ ಮಾಡುವ ವಿಧಾನವು ಸಾಮಾನ್ಯ ಮಾನವರಿಗಾಗಿ ಮಾಡಿರುವ ನಿಯಮವಾಗಿದೆ ಇದು ಧನವಂತರಿಗೆ ಅನ್ವಯವಾಗುವ ನಿಯಮವಲ್ಲ ಅವರಿಗೇ ಬೇರೆ ನಿಯಮವಿದೆ.

ವೈಭವ ಜೀವನ ನಡೆಸುವ ಉದಾರಮನಸ್ಸಿನ ಧನವಂತರು ತಮ್ಮ ಸಂಪಾದಿತ ಧನವನ್ನು ಐದು ಭಾಗಗಳಾಗಿ ಮಾಡಬೇಕು

ಧರ್ಮಾಯ ಯಶಸೇಽರ್ಥಾಯ
ಕಾಮಾಯ ಸ್ವಜನಾಯ ಚ
ಪಂಚಧಾ ವಿಭಜನ್ ವಿತ್ತ
ಮಿಹಾಮುತ್ರ ಚ ಮೋದತೇ

ಈ ಐದು ಭಾಗಗಳನ್ನು ಧರ್ಮ, ಯಶ, ಅರ್ಥ (ವ್ಯಾಪಾರ ಇತ್ಯಾದಿಗಳಲ್ಲಿ), ಕಾಮ (ಜೀವನೋಪಯೋಗೀ ಖರ್ಚುಗಳಿಗಾಗಿ) ಹಾಗೂ ಸ್ವಜನ (ನೆಂಟರಿಷ್ಟರು) - ಇವುಗಳಿಗಾಗಿ ಖರ್ಚು ಮಾಡಬೇಕು

ಈ ರೀತಿಯಲ್ಲಿ ತನ್ನ ಸಂಪಾದನೆಯನ್ನು ಐದು ಭಾಗಗಳಲ್ಲಿ ವಿಭಾಗಿಸಿ, ಮೇಲೆ ತಿಳಿಸಿದಂತೆ ಹಂಚುವ ಧನವಂತನು ಈ ಲೋಕದಲ್ಲಿಯೇ ಅಲ್ಲದೆ ಪರಲೋಕದಲ್ಲಿಯೂ ಆನಂದವನ್ನು ಪಡೆಯುವನು.

ವ್ಯಾಪಾರ ಇತ್ಯಾದಿ ಜೀವನೋಪಯೋಗಕ್ಕೆ ಸಂಪಾದನೆಯ ಒಂದು ಭಾಗವನ್ನು ಮೀಸಲಿರಿಸುವುದು ತುಂಬಾ ಅಗತ್ಯ ಜೀವನ ಸಾಧನೆಯು ನಾಶವಾಗಬಾರದು ಜೀವನಾಗತ್ಯಕ್ಕಾಗಿ ಒಂದು ಅಂಶ ಬೇಕೇಬೇಕು ಸಂಪಾದಿಸಿದುದು ಎಲ್ಲವನ್ನೂ ದಾನ ಮಾಡುವುದು, ಗೃಹಜೀವನದ ಅಗತ್ಯಗಳ ಪೂರೈಕೆಗಾಗಿ ಹಣವನ್ನು ಉಳಿಸದೇ ಇರುವುದು, ಕೆಲವೊಂದು ಸಂತರ ಜೀವನ ಚರಿತ್ರೆಗಳಲ್ಲಿ ಬರುವ ಇಂತಹ ಘಟನೆಗಳು ಮಾನವ ಧರ್ಮ ಹಾಗೂ ವ್ಯಕ್ತಿಯ ಕರ್ತವ್ಯಗಳಿಗೆ ಧಕ್ಕೆಯನ್ನು ಒದಗಿಸುವಂತಹುದಾಗಿರುತ್ತದೆ ಜೀವನ ನಿರ್ವಹಣೆಯಿಂದ ವ್ಯಕ್ತಿಯು ದಾನ, ಯಜ್ಞ, ತಪಸ್ಸು - ಇತ್ಯಾದಿ ಶುಭಕರ್ಮಗಳನ್ನು ಮಾಡುವುದಕ್ಕೆ ಸಮರ್ಥನಾಗಿರುತ್ತಾನೆ

ನ ತದ್ದಾನಂ ಪ್ರಶಂಸಂತಿ
ಯೇನ ವೃತ್ತಿರ್ವಿಪದ್ಯತೆ
ದಾನಂ ಯಜ್ಞಸ್ತಪಃ ಕರ್ಮ
ಲೋಕೇ ವೃತ್ತಿಯತೋ ಯತಃ

## ದಾನದ ನಿಯಮಗಳು

ದಾನ ಮಾಡುವುದಕ್ಕೆ ನಿಯಮಗಳೂ ಇವೆ

ಯಾರು ದಾನ ಮಾಡಬೇಕು, ಯಾರು ದಾನ ಮಾಡಬಾರದು - ಎಂಬುದನ್ನು ಶಾಸ್ತ್ರಗಳು ನಿರ್ಧರಿಸಿವೆ

ಧನವೇ ಇಲ್ಲದ ವ್ಯಕ್ತಿ, ಸಂಪಾದನೆಯೇ ಇಲ್ಲದ ನಿರ್ಧನನು, ಅನವಶ್ಯಕ ಒಂದು ಕಾಸನ್ನೂ ಬೇರೆಯದಕ್ಕಾಗಿ ಖರ್ಚು ಮಾಡಲಾರದವನು, ಬಹಳ ಕಷ್ಟದಿಂದ ತನ್ನ ಸಂಸಾರದ ನಿರ್ವಹಣೆ ಮಾಡುತ್ತಿರುವವನು, ಇನ್ನೊಬ್ಬರ ಮೇಲೆ ಆಧಾರಪಟ್ಟಿರುವ ವೃದ್ಧರು, ಬಾಲರು - ಇಂತಹವರು ದಾನ ಮಾಡಬೇಕಾದ ಅಗತ್ಯವೇ ಇಲ್ಲ ಎಂದು ಶಾಸ್ತ್ರಗಳು ತಿಳಿಸುತ್ತವೆ

ತನ್ನನ್ನು ಸಾಕಿದ, ವೃದ್ಧರಾಗಿರುವ ಮಾತಾ - ಪಿತೃಗಳು, ಸಾಧ್ವೀಪತ್ನಿ ಹಾಗೂ ಸಾಕಬೇಕಾದ ಮಕ್ಕಳನ್ನು ಸಾಕದೆ ಪುಣ್ಯ ಬರುತ್ತದೆ ಎನ್ನುವ ಲೋಭದಿಂದ ಅವರ ಊಟ ತಿಂಡಿ ಬಟ್ಟೆಗಳ ಖರ್ಚುಗಳಿಗೆ ಕತ್ತರಿ ಏಟು ಹಾಕಿ ದಾನ ಮಾಡಿದರೆ, ಅಂತಹವರು ಪಾಪಾತ್ಮರಾಗುವರೇ ಹೊರತು, ಅವರಿಗೆ ಪುಣ್ಯವು ಲಭ್ಯವಾಗುವುದೇ ಇಲ್ಲ

ಶಕ್ತಃ ಪರಜನೇ ದಾತಾ
ಸ್ವಜನೇ ದುಃಖ ಜೀವಿನಿ
ಮಧ್ವಾಪಾತೋ ವಿಷಾಸ್ವಾದಃ
ಸ ಧರ್ಮ ಪ್ರತಿ ರೂಪಕಃ

ಓರ್ವ ಹಣವಂತನಿರುವನು ಅವನ ನೆಂಟರಿಷ್ಟರು, ಸ್ವಜನರು ಕಷ್ಟಕರ ಜೀವನ ನಡೆಸುತ್ತಿರು

ತ್ತಾರೆ ಅವರನ್ನು ಸಾಕುವ ಶಕ್ತಿ ಆ ಧನವಂತನಿಗೆ ಇರುತ್ತದೆ ಆದರೂ ಅವರನ್ನು ಸಾಕುವುದಿಲ್ಲ ಬದಲಾಗಿ ದೇರೆಯವರಿಗೆ ದಾನ ಮಾಡುವನು ಇದು ಜೇನುತುಪ್ಪ ಸವರಿದ ವಿಷದ ಸಮಾನ, ಧರ್ಮದ ಲೇಪದ ಅಧರ್ಮವಾಗಿರುತ್ತದೆ ಇದು

ಪುರಾಣಗಳಲ್ಲಿ ದಾನದ ಬಗ್ಗೆ ಒಂದು ಉತ್ತಮ ಹೇಳಿಕೆ ಇದೆ ಅದೇಂದರೆ - ಹೊಟ್ಟೆ ತುಂಬು ವಷ್ಟು ಆಹಾರಕ್ಕೆ ಆವಶ್ಯಕತೆಗಳಿಗೆ ಸಂಬಂಧ ಪಟ್ಟ ಹಣಕ್ಕೆ ಮಾತ್ರ ವ್ಯಕ್ತಿಗೆ ಅಧಿಕಾರವಿರುತ್ತದೆ ಸ್ವತಃ ಅವನ ಸಂಪಾದನೆಯಾದರೂ ಉಳಿದಿದ್ದಕ್ಕೆ ಅವನಿಗೆ ಅಧಿಕಾರವಿರುವುದಿಲ್ಲ ಈ ಹೆಚ್ಚಿನ ಹಣಕ್ಕೆ ತನಗೆ ಅಧಿಕಾರ ಇದೆ ಎಂದು ಹೇಳಿಕೊ ಳ್ಳುವವನು ಕಳ್ಳನಾಗಿರುತ್ತಾನೆ ಅವನು ಶಿಕ್ಷೆಗೆ ಅರ್ಹನಾಗಿರುತ್ತಾನೆ-

ಯಾವದ್ ಭ್ರಿಯೇತ ಜಠರಂ
ತಾವತ್ ಸ್ವತ್ವಂ ಹಿ ದೇಹಿನಮ್
ಅಧಿಕಂ ಯೋಽಭಿಮನ್ಯೇತ
ಸ ಸ್ತೇನೋ ದಂಡಮರ್ಹತಿ

## ಕಪಿಲ ಸ್ಮೃತಿಯಲ್ಲಿ ದಾನ ಪ್ರಕರಣ

ಕಪಿಲಸ್ಮೃತಿಯಲ್ಲಿ ದಾನ ಮಾಡುವುದರ ಪ್ರಾಮುಖ್ಯತೆಯನ್ನು ವಿಸ್ತಾರವಾಗಿ ವಿವರಿಸಲಾ ಗಿದೆ ಮುಖ್ಯವಾಗಿ ಧರಾದಾನ, ಧೇನುದಾನ, ಗಜದಾನ, ರಥದಾನ, ಮಹೌಷಧಿದಾನ, ಹಿರ ಣ್ಯದಾನ, ಸಪ್ತಧಾನ್ಯದಾನ ಹಾಗೂ ದೇವ ಪ್ರತಿ ಮಾದಾನ - ಇತ್ಯಾದಿ ಅನೇಕ ವಿಧಗಳ ದಾನಗ ಳನ್ನು ವರ್ಣಿಸಲಾಗಿದೆ ಆದರೆ ಇವೆಲ್ಲವುಗಳಲ್ಲಿ ಭೂಮಿದಾನವು ಸರ್ವೋತ್ಕೃಷ್ಟವಾದುದು-

ಧರಾದಾನಂ ಪ್ರಶಂಸಂತಿ
ಸರ್ವದಾ ಸೋತ್ತಮೋತ್ತಮಮ್
|| 429 ||

ದಾನದ ವಿಷಯದಲ್ಲಿ ಕಪಿಲನು ಕೆಲವೊಂದು ಮಹತ್ವದ ವಿವರಗಳನ್ನು ತಿಳಿಸಿದ್ದಾನೆ ದಾನ ವನ್ನು ಸತ್ಪಾತ್ರನಿಗೆ, ವಿಧಿಪೂರ್ವಕವಾಗಿ ನೀಡ ಬೇಕು ನಿಷ್ಕಾಮಭಾವದಿಂದ ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿ ಮಾತ್ರ ಅದರ ಗುರಿಯಾಗಿ ರಬೇಕು ಭಗವಂತನ ತೃಪ್ತ್ಯರ್ಥವಾಗಿ, ಅವನ ಪ್ರೀತ್ಯರ್ಥವಾಗಿ ದಾನ ಮಾಡಿದಲ್ಲಿ, ಅಂತಹ ಕಾರ್ಯವು ಕೆಲವೊಂದು ಲೋಪದೋಷಗಳು ಹಾಗೂ ವೈಫಲ್ಯಗಳು ಇದ್ದಾಗ್ಲೂ ಅದು ಅಪೂ ರ್ಣವಾಗುವುದಿಲ್ಲ ಪರಮಾತ್ಮನ ಕೃಪೆಯಿಂದ ಅದು ಪರಿಪೂರ್ಣವೆಂದೇ ಹೇಳಬೇಕು ಅಂತ ಹುದು ಫಲಪ್ರದವೂ ಆಗಿರುತ್ತದೆ ಒಂದು ವೇಳೆ ಪ್ರತಿಫಲವನ್ನು ಅಪೇಕ್ಷಿಸಿ ದಾನ ಮಾಡಿದ್ದೇ ಆದರೆ ಅದು ಅಪೂರ್ಣವಾಗಿದ್ದು, ವಿಧಿ ದೋಷ ದಿಂದ ಕೂಡಿರುತ್ತದೆ ಕರ್ಮದ ಅಂಶದಲ್ಲಿ ಲೋಪವಾಗುವುದರಿಂದ ಕಾಮ್ಯಾ - ಕರ್ಮದ ಪೂರ್ಣತೆಯ ಸಫಲತೆಯಲ್ಲಿ ಸಂಶಯ ಉಂಟಾ ಗುತ್ತದೆ

ಒಂದು ವೇಳೆ ಲೋಭದಿಂದ, ಮೋಹಗಾ ರಿಕೆ ಹಾಗೂ ನೀಚತನಗಳಿಂದ ದಾನ ಮಾಡಿದ್ದೇ ಆದಲ್ಲಿ, ಅಂತಹ ದಾನವು ಸಫಲವಾಗುವುದಿಲ್ಲ ಆದುದರಿಂದ ಸಜ್ಜನರ ಮುಖಾಂತರ ಭಗವತ್ ಪ್ರೀತಿ ನಿಮಿತ್ತವಾಗಿ ದಾನವನ್ನು ಕೊಡಬೇಕು ಇದಕ್ಕಾಗಿ ಯಾವುದೇ ಪ್ರತಿಫಲವನ್ನೂ ಅಪೇಕ್ಷಿ ಸಬಾರದು

ಕಾಮನಾ ರಹಿತಾನಿಸ್ಸು
ಬ್ರಹ್ಮಜ್ಞಾನಾಯಕೇವಲಮ್ || 441 ||
ಯತ್ಕಿಂಚಿದಂಗಲೋಪೇಽಪಿ
ಕಾಮ್ಯಂ ಕರ್ಮ ನ ಸಿಧ್ಯತೇ || 442 ||
ಅಪ್ಯನೇಕಾಂಗ ವಿಕಲಂ
ಕ್ರಿಯತೇ ಪರಮೇಶ್ವರಮ್
ತತ್ಕರ್ಮ ಸಫಲಂ ಸದ್ಯೋ
ಭವಿಷ್ಯತಿ ನ ಸಂಶಯಃ || 445 ||
ತಸ್ಮಾತ್ ಸದ್ಭಿಃ ಸದಾ ಕಾರ್ಯಂ
ಕರ್ಮ ಮಾತ್ರಂ ನ ಸಂಶಯಃ || 446 ||

ಸ್ವತಃ ನ್ಯಾಯರೀತಿಯಲ್ಲಿ ಧನಾರ್ಜನೆ ಮಾಡಿ, ಅಂತಹ ಹಣದಿಂದ ಪಡೆದ ವಸ್ತುವನ್ನೇ ದಾನ ಮಾಡಬೇಕು ಇಂತಹವನ್ನು ದಾನ ಮಾಡುವ ವನೇ ದಾನಕ್ಕೆ ಅಧಿಕಾರಿಯಾಗಿರುತ್ತಾನೆ ಬೇರೆ ಯವರ ವಸ್ತುವನ್ನು ಕದ್ದೊ, ಪಡೆದೊ, ಮಾಡಿದ ದಾನವು ವ್ಯರ್ಥವಾಗುತ್ತದೆ. ಅನ್ಯಾಯದಿಂದ, ಕಳ್ಳ ತನದಿಂದ, ಮೋಸದಿಂದ ಪಡೆದ ಹಾಗೂ ಫಲ ಕಪಟಗಳಿಂದ ಹೊಂದಿದ, ಸುಳ್ಳಿನ ಉಪಾಯ ಗಳಿಂದ ಪ್ರಾಪ್ತಗೊಂಡ ಹಣದ ಮುಖಾಂತರ ಪಡೆದ ವಸ್ತುವನ್ನು ದಾನ ಮಾಡಬಾರದು

ಸ್ವೀಯಸ್ಯ ದಾನಂ ಕುರ್ಯಾತು
ನಾನ್ಯದೀಯಸ್ಯ ವಸ್ತುನಃ
ನ್ಯಾಯಾರ್ಜಿತಸ್ಯ ದ್ರವ್ಯಸ್ಯ
ಪ್ರದಾನಂ ಯೋಗ್ಯತಾ ಭವೇತ್ || 447 ||

ಅನ್ಯಾಯೇ ನಾರ್ಜಿತಂ ದ್ರವ್ಯಂ
ಚೌರ್ಯವ್ಯಾಮೋಹಾದಿಭಿಃ
ಸಂಪ್ರಾಪ್ತಂ ಮಾಗತಂ ಚಾಪಿ
ದಾನ ಯೋಗ್ಯಾನಿ ನಾಚರೇತ್ || 448 ||

ಮಾಡಿದ ದಾನದಿಂದ ಯಾರಿಗೂ ನೋವು ಆಗ ಬಾರದು, ಕಷ್ಟವಾಗಬಾರದು, ದುಃಖವಾಗಬಾ ರದು ನೋವುಂಟು ಮಾಡುವ ದಾನವು ವ್ಯರ್ಥ ವಾಗುತ್ತದೆ ಅದು ನಿಷ್ಫಲವೂ, ಅಧರ್ಮಕಾರ ಕವೂ ಆಗುತ್ತದೆ ದಾನದ ಉದ್ದೇಶ್ಯವು ಸದ್ಧರ್ಮಾ ನುಷ್ಠಾನವಾಗಿದೆ ದೇರೆಯವರಿಗೆ ನೋವುಂಟು ಮಾಡುವ ದಾನವನ್ನು ಕೊಡುವವನು ಹಾಗೂ ಪಡೆಯುವವನು - ಇಬ್ಬರಿಗೂ ನರಕಪ್ರಾಪ್ತವಾ ಗುತ್ತದೆ

ಕೃತೇನ ದಾನೇನ ಯಥಾ
ಪರಪೀಡಾ ನ ಜಾಯತೆ
ವೃಥಾ ತಥಾ ಪ್ರಕುರ್ವೀತ
ದಾನಂ ಧರ್ಮಾಯ ತತ್ಪರಃ || 449 ||

ಪರಪೀಡಾಕರಂ ದಾನಂ
ದಾತುಸ್ತದ್ ಗ್ರಾಹಕಸ್ಯ ಚ
ಉಭಯೋರ್ನರಕಾಯೈವ
ಫಲಿಷ್ಯತಿ ನ ಚಾನ್ಯಥಾ || 450 ||

## ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ದಾನ ಪ್ರಕರಣ

ಈ ಸ್ಮೃತಿಯ ದಾನ ಪ್ರಕ ರಣದಲ್ಲಿ 'ಗೋದಾನ'ದ ಮಹಿಮೆಯನ್ನು ತಿಳಿಸ ಲಾಗಿದೆ ಅಂತಹುದು ಅನಂತ ಫಲವನ್ನು ನೀಡು ವಂತಹುದು. ದೀನರು, ಅನಾಥರು, ದುರ್ಬಲ ರಿಗೆ ಸಹಾಯ, ರೋಗಿಗಳ ಸೇವೆ ಹಾಗೂ ಅವ ರಿಗೆ ಔಷಧಿ - ಇತ್ಯಾದಿಗಳನ್ನು ದಾನ ಮಾಡುವು ದನ್ನು ಗೋದಾನಕ್ಕೆ ಸಮಾನ ಎಂದು ಪರಿಗಣಿ ಸಲಾಗುತ್ತದೆ. ಈ ಪ್ರಕರಣದ ಕಡೆಯಲ್ಲಿ ಬ್ರಹ್ಮವಿ ದ್ಯೆಯ ದಾನವು ಸರ್ವೋತ್ಕೃಷ್ಟವಾದುದೆಂದು ತಿಳಿ ಸಿದೆ ಇದರಿಂದ ಬ್ರಹ್ಮಲೋಕಪ್ರಾಪ್ತಿಯಾಗುತ್ತ ದೆಯೆಂದೂ ತಿಳಿಸಿದೆ -

ಸರ್ವಧರ್ಮ ಮಯಂ ಬ್ರಹ್ಮ
ಪ್ರದಾನೇಭ್ಯೋಽಧಿಕೆ ಯತಃ
ತದ್ದದತ್ ಸಮವಾಪ್ನೋತಿ
ಬ್ರಹ್ಮಲೋಕಮವಿಚ್ಯುತಮ್
(ಯಾಜ್ಞ - ಆಚಾರಾಧ್ಯಾಯ 212)

* * *

# ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲ ಮೂಲ - **ಡಾ|| ಎನ್. ರಮೇಶನ್.**

ಕನ್ನಡಾನುವಾದ - **ಬಿ. ಎನ್. ಶ್ರೀನಿವಾಸನ್.**

(ಮುಂದುವರೆದಿದೆ)

## ರಾಮಾನುಜರು - ಆಲಯ

ತಿರುಮಲೆಯ ಆಲಯದಆಚಾರ ಸಂಪ್ರದಾಯಗಳಲ್ಲಿ ಶ್ರೇಷ್ಠ ಶ್ರೀ ವೈಷ್ಣವ ಸಂತರಾದ ಭಗವದ್ರಾಮಾನುಜರು ಬಹು ಪ್ರಭಾವಶಾಲಿಯಾದ ಪಾತ್ರ ನಿರ್ವಹಿಸಿದರೆಂದು ಪರಂಪರೆಯಿಂದ ನಂಬಲಾಗಿದೆ

ಕ್ರಿಸ್ತಶಕದ ಹನ್ನೊಂದನೆಯ ಶತಮಾನದ ಉತ್ತರಾರ್ಧ ಹಾಗೂ ಹನ್ನೆರಡನೆಯ ಶತಮಾನದ ಮೊದಲಭಾಗದಲ್ಲಿ ಶ್ರೀ ವೈಷ್ಣವ ಪಂಥವನ್ನೂ ಶ್ರೀ ವೈಷ್ಣವ ತತ್ವವನ್ನೂ ಪ್ರಸಾರಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ ಸಂತ ಶ್ರೇಷ್ಠರು ಭಗವದ್ರಾಮಾನುಜರು ಭಗವಂತನಲ್ಲಿ ಭಕ್ತಿ ಹಾಗೂ ಸಮಾಜದವರಲ್ಲಿ ಸಹಾನುಭೂತಿ ಅವರ ಪಂಥದ ಪ್ರಮುಖ ಲಕ್ಷಣಗಳು ಹಿಂದೂ ಧರ್ಮದ ಸರ್ವದೇವತೆಗಳಲ್ಲಿ ಹರಿಸರ್ವೋತ್ತಮತ್ವ ಅವರ ತಾತ್ವಿಕತೆಯ ತಳಹದಿಯಾಗಿದೆ. ವಿಷ್ಣುವಿನಲ್ಲಿ ಎಡೆಬಿಡದ ಭಕ್ತಿ ಪ್ರಪತ್ತಿಗಳಿಂದಾಗಿ ಮುಕ್ತಿ ಪಡೆಯಲು ಸಾಧ್ಯವೆಂದು ಅವರು ಆಚರಣೆಯಲ್ಲಿ ತಂದು ತೋರಿಸಿ ಪ್ರಸಾರ ಮಾಡಿದರು ಅವರ ವಿದ್ವತ್ಪೂರ್ಣ ವ್ಯಾಖ್ಯಾನಗಳಿಂದಾಗಿ ಭಕ್ತಿಪೂರ್ವಕ ವಿವರಣೆಗಳಿಂದಾಗಿ ಅಸಂಖ್ಯಾತ ಮಂದಿ ಶ್ರೀ ವೈಷ್ಣವರಾಗುವಂತೆ ಆಯಿತು "ಈ ಹೊಸದಾಗಿ ಮೂಡಿ ಬಂದ ಶ್ರೀವೈಷ್ಣವ ಸಮುದಾಯ ಬ್ರಾಹ್ಮಣರಿಂದ ಮಾತ್ರವೇ ಕೂಡಿರದೆ ಪರಮ ಸಹಿಷ್ಣುವಾಗಿ ಎಲ್ಲ ಜಾತಿ, ಪಂಥ, ವರ್ಗ, ವರ್ಣ, ಲಿಂಗಗಳವರನ್ನೂ ಒಳಗೊಂಡಿದ್ದಿತು"

ಅನಂತಾರ್ಯನು ಬರೆದ ಶ್ರೀ ವೆಂಕಟಾಚಲ ಇತಿಹಾಸಮಾಲೆ ಕೃತಿಯು ತಿರುಪತಿಯಲ್ಲಿ ರಾಮಾನುಜರ ಜೀವನ ಕೈಂಕರ್ಯವನ್ನು ವಿವರವಾಗಿ ಬಣ್ಣಿಸಿದೆ ರಾಮಾನುಜರ ತಿರುಪತಿ ಸಂಬಂಧವು ಅವರ ತಾಯಿಯ ಸೋದರರಾದ ತಿರುಮಲೆ ನಂಬಿಯಿಂದ ಆರಂಭವಾಯಿತೆನ್ನಬಹುದು ತಿರುಮಲೆ ನಂಬಿಯು ತಮ್ಮ ತಾತಂದಿರಾದ ಆಳವಂದಾರರ (ಯಾಮುನಾಚಾರ್ಯ) ಅಪೇಕ್ಷೆಯಂತೆ ತಿರುಮಲೆಯ ದೇವರ ಕೈಂಕರ್ಯ ಸಲ್ಲಿಸಲು ತಿರುಪತಿಗೆ ಬಂದು ನೆಲೆಸಿದರು ಅವರೊಡನೆ ಅವರ ಇಬ್ಬರು ಅವಿವಾಹಿತ ಸಹೋದರಿಯರೂ ತಿರುಪತಿಗೆ



ಬಂದರು ಆ ನಂತರ ರಾಮಾನುಜಗ ತಂದೆಯವರು ಈ ಸೋದರಿಯರಲ್ಲಿ ಒಬ್ಬರನ್ನು ವಿವಾಹವಾಗಿ ರಾಮಾನುಜರನ್ನು ಪಡೆದರು ರಾಮಾನುಜರ ತಂದೆಯವರು ತಿರುಪತಿಯಿಂದ ಬಹು ದೂರ ಎಂದೇನೂ ಹೇಳಲಾಗದ ಶ್ರೀ ಪೆರಂಬುದೂರಿನವರು ತಾಯಿಯ ತವರಿನಲ್ಲಿ ನಡೆಯಬಹುದಾಗಿದ್ದು ಮನೆಗೆ ಸಂಬಂಧಿಸಿದ ಕೆಲಸಗಳಲ್ಲಿ ರಾಮಾನುಜರು ತಿರುಪತಿಗೆ ಬಂದಿರಬಹುದಾದ ಸಂದರ್ಭಗಳ ಹೊರತಾಗಿ, ವೈಷ್ಣವ ಪಂಥದ ಗುರುವಾಗಿ ರಾಮಾನುಜರು ಪ್ರಥಮ ಬಾರಿ ತಿರುಪತಿಗೆ ಬಂದದ್ದು ಎಂದರೆ ತಮ್ಮ ಸೋದರ ಮಾವನವರಿಂದ ರಾಮಾಯಣ ರಹಸ್ಯಾರ್ಥವನ್ನು ಕಲಿಯಲು ಬಂದದ್ದೇ ಆಗಿದ್ದಿತು ಈ ಬಾರಿ ಅವರು ಒಂದು ವರ್ಷಕಾಲ ತಿರುಮಲೆ ನಂಬಿಯವರಿಂದ ಪಾಠಪಡೆದು ನಂತರ ಶ್ರೀರಂಗಕ್ಕೆ ಹಿಂದಿರುಗಿದರೆನ್ನಲಾಗಿದೆ

ಆ ನಂತರ ರಾಮಾನುಜರು ತಿರುಪತಿಗೆ ಎರಡನೆಯ ಸಾರಿ ಬಂದರು ತಿರುಪತಿಯಲ್ಲಿ ಅಂದಿಗೆ ವೈಖಾನಸ ಆಗಮ ಪದ್ಧತಿಯಲ್ಲಿ ಪೂಜೆ ನಡೆಯುತ್ತಿದ್ದಿತು ಶತಮಾನಗಳ ಈ ಪರಂಪರೆಯಲ್ಲಿ ಹಲವಾರು ನ್ಯೂನತೆಗಳು ಒಳಸೇರಿಕೊಂಡಿದ್ದವು ಎಂದು ತೋರುತ್ತದೆ ವೆಂಕಟಾಚಲ ಇತಿಹಾಸ ಮಾಲೆ ಹೇಳುವಂತೆ ರಾಮಾನುಜರು ತಿರುಪತಿಯ ಪೂಜಾವಿಧಾನದಲ್ಲಿ ಉತ್ಸವಗಳನ್ನು ನಡೆಸುವಲ್ಲಿ ಹಲವಾರು ನೂತನ ಸುಧಾರಣೆಗಳನ್ನು ಜಾರಿಗೆ ತರುವಲ್ಲಿ ಸಫಲರಾದರು ಈ ಹೊತ್ತಿಗೆ ತಿರುಪತಿಯಲ್ಲಿ ತಿರುಮಲೆನಂಬಿಗಳು ಬದುಕಿದ್ದು ಭಗವಂತನ ನಿತ್ಯ ಕೈಂಕರ್ಯದಲ್ಲಿಯೇ ಇದ್ದರು ಜೊತೆಗೇ ರಾಮಾನುಜರ ಶಿಷ್ಯ ಅನಂತಾರ್ಯರೂ ರಾಮಾನುಜರಿಂದ ಆಜ್ಞಪ್ತರಾಗಿ ಸ್ವಾಮಿಯ ಸೇವೆಯನ್ನು ನಡೆಸುವಂತಾಗಿದ್ದರು ಈ ಹೊತ್ತಿಗೆ ಬಹಳ ವೃದ್ಧರಾಗಿದ್ದ ತಿರುಮಲನಂಬಿಯವರು ನಿರ್ದೇಶನದಲ್ಲಿ ಅನಂತಾರ್ಯರು ಕೈಂಕರ್ಯವನ್ನು ಮುಂದುವರಿಸಿದ್ದರು

ಮೂರನೆಯ ಬಾರಿಗೆ ರಾಮಾನುಜರು ತಿರುಪತಿಯನ್ನು ಸಂದರ್ಶಿಸಿದಾಗ ಅವರಿಗೆ ವೃದ್ಧಾಪ್ಯವಾಗಿದ್ದಿತು ಅವರ ವಯಸ್ಸು ಅತಿ ಹೆಚ್ಚಾಗಿದ್ದ ಕಾರಣ ಇದೇ ಅವರ ಕೊನೆಯ ಸಂದರ್ಶನವೂ ಆಗಿದ್ದಿರಬೇಕು ತಾವು ಇಲ್ಲಿಗೆ ಬಂದ ಈ ಸಂದರ್ಭದಲ್ಲಿ ಅವರು ಈ ಹಿಂದೆ ಮಾಡಿದ್ದ ಪೂಜಾಪದ್ಧತಿಯ ಸುಧಾರಣೆಗಳ ಮೇಲು ವಿಚಾರಣೆಯನ್ನು ನಿಷ್ಪಕ್ಷಪಾತದಿಂದ ನೋಡಿಕೊಳ್ಳಲು ಒಬ್ಬ ಸನ್ಯಾಸಿಯನ್ನೂ ಅವರ ನೆರವಿಗೆ ಇಬ್ಬರು ಬ್ರಹ್ಮಚಾರಿಗಳನ್ನೂ ನಿಯಮಿಸಿದರು ಪ್ರಬಂಧ ಪಠಣ ಮಾಡಲು ಸಮರ್ಪಕವಾಗಿ ನಿರ್ವಹಿಸಲು ಒಬ್ಬ ಅರ್ಯೆಯರನ್ನು ನಿಯಮನಗೊಳಿಸಿದರು ಇವರು ನಂತರದಲ್ಲಿ ಮುಖ್ಯ ಸೇವಾದಾರರಾಗಿ ಇವರಿಗೆ ಶಠಗೋಪಯತಿ ಎಂಬ ಹೆಸ

ರಾಯಿತು ಇವರಿಗೆ ನಾಲ್ವರು ಬ್ರಹ್ಮಚಾರಿಗಳು ಆಲಯ ನಿರ್ವಹಣೆಯಲ್ಲಿ ನೆರವು ನೀಡುವಂತೆ ಆಯಿತು ಆಲಯದ ಈ ಎಲ್ಲ ಏರ್ಪಾಡುಗಳನ್ನು ಸ್ಥಳದ ರಾಜನಾದ ಯಾದವರಾಯನು ಈ ಹೊತ್ತಿಗೆ ಅರವತ್ತಾರು ವರ್ಷದ ಹಿರಿಯರಾಗಿದ್ದ ಅನಂತಾರ್ಯರ ಸಲಹೆ ಸೂಚನೆಗಳಂತೆ ಜಾರಿಗೆ ತರುವ ಹೊಣೆಗಾರನಾಗಿದ್ದನೆಂದು ಇತಿಹಾಸ ಮಾಲೆ ವಕ್ಕಾಣಿಸುತ್ತದೆ

ಶ್ರೀ ವೆಂಕಟೇಶ್ವರ ಇತಿಹಾಸ ಮಾಲೆಯು ತಿರುಮಲೆಯ ಆಲಯಕ್ಕೆ ಭಗವದ್ರಾಮಾನುಜರೂ ಅವರ ತರುವಾಯ ಅವರ ಶಿಷ್ಯ ಅನಂತಾರ್ಯರೂ ಮಾಡಿದ ಏಳು ಬಗೆಯ ಕೈಂಕರ್ಯಗಳನ್ನು ವಿವರಿಸುತ್ತದೆ ಅವರ ಕಾಲದ ನಂತರದ ಶತಮಾನದ ಶಾಸನಗಳಲ್ಲಿ ರಾಜಾನುಜರ ಹಾಗೂ ಅನಂತಾರ್ಯರ ಹೆಸರಿನ ತುಲಸೀವನಗಳು, ಮತ್ತಿತರ ಹಬ್ಬ ಉತ್ಸವಗಳಲ್ಲಿ ಅವರ ಹೆಸರುಗಳು ಪುನಃ ಪುನಃ ಕಂಡುಬರುವುದರಿಂದ ರಾಮಾನುಜರು ಮತ್ತು ಅನಂತಾರ್ಯರು ನಡೆಸಿದ ಸೇವಾ ಕೈಂಕರ್ಯಗಳು ಐತಿಹಾಸಿಕವಾಗಿ ಸಂಶಯಾತೀತವೆಂದು ತಿಳಿಯಬಹುದು ತಿರುಪತಿಯ ಆಲಯದ 171, 173 ನೇ ಶಾಸನಗಳು ಆನಂದಾಳ್ವಾನ್ ಹೆಸರನ್ನು ಸಂಶಯಕ್ಕೆ ಎಡೆನೀಡದಂತೆ ಸ್ಪಷ್ಟವಾಗಿ ಹೇಳುತ್ತದೆ ಜೊತೆಗೇ 175 ನೇ ಶಾಸನವೂ ಇಷ್ಟೇ ಖಚಿತವಾಗಿ ರಾಮಾನುಜರ ಹೆಸರನ್ನು ತಿರುನಂದನವನದೊಡನೆ ಸೇರಿಸಿ ಹೇಳುತ್ತದೆ. ಹೀಗಾಗಿ ರಾಮಾನುಜರ ಪ್ರಥಮ ಯತ್ನವೆಂದರೆ ಯಾದವರಾಯನು ಈ ಆಲಯವು ವಿಷ್ಣುವಿನ ಆಲಯವೆಂದು ಉದ್ಘೋಷಿಸುವಲ್ಲಿ ಹಾಗೂ ಪ್ರಾಚೀನ ಕಾಲದಿಂದಲೂ ಪ್ರಚಲಿತವಾಗಿದ್ದ ವೈಖಾನಸಾಗಮ ರೀತಿಯ ಪೂಜಾ ಪದ್ಧತಿಯನ್ನು, ದೋಷ ಪರಿಹಾರದ ಪವಿತ್ರೋತ್ಸವದ ಆಚರಣೆಯ ನಂತರ ಪುನಃ ಸ್ಥಾಪಿಸುವುದೇ ಆಗಿದ್ದಿತು ಆನಂದ ನಿಲಯ ವಿಮಾನವ ಜೀರ್ಣೋದ್ಧಾರ ಕಾರ್ಯವನ್ನು ಆಗಮಾನುಸಾರವಾಗಿ ಅವರು ಕೈಗೊಂಡರೆಂದು ಹೇಳಲಾಗಿದೆ ಪದ್ಮಾವತಿದೇವಿಯ ಚಿತ್ರವಿರುವ ಚಿನ್ನದ ಕಂಠಹಾರವನ್ನು ಮಾಡಿಸಿ ಸ್ವಾಮಿಯ ವಕ್ಷಸ್ಥಳದಲ್ಲಿ ಸ್ಥಾಪಿಸಿದರೆಂದೂ ಹೇಳಲಾಗಿದೆ ಇದು ಮೊದಲನೆಯ ಭಾಗವಷ್ಟೆ, ನಂತರ ಅವರ ಗಮನವನ್ನು ಸೆಳೆದ ಅಂಶವೆಂದರೆ ವಾರಾಭಿಷೇಕ ಗುರುವಾರದಂದು ಸ್ವಾಮಿಗೆ ಅಲಂಕರಿಸಲಾಗುವ ಎಲ್ಲ ಆಭರಣಗಳನ್ನೂ ತೆಗೆದು ಸ್ವಾಮಿಯನ್ನು ಬರಿ ಹೂವುಗಳಿಂದ ಮಾತ್ರವೇ ಅಲಂಕರಿಸಲಾಗುವುದು ಈ ಕೈಂಕರ್ಯ (ಪುಷ್ಪ ಕೈಂಕರ್ಯ) ನಡೆಯುವಾಗ ನಾಚ್ಚಿಯಾರ್ ತಿರುಮೊಳಿಯನ್ನು ಹಾಡುವ ಪದ್ಧತಿಯನ್ನು (ನಾಚ್ಚಿಯಾರ್ ತಿರುಮೊಳಿ ನಾಲಾಯಿರ ದಿವ್ಯಪ್ರಬಂಧದ ಒಂದು ಭಾಗ) ಅವರು ಜಾರಿಗೆ ತಂದರು ವೈಖಾನಸ ಆಗಮ ಶಾಸ್ತ್ರದ ಅನುಸಾರವಾಗಿ, ಸುವ್ಯವಸ್ಥಿತವಾಗಿ ಪೂಜೆಯು ನಿರಂತರವಾಗಿ ನಡೆಯುವುದನ್ನು ನೋಡಿಕೊಳ್ಳಲು, ಈ ಮುಂಚಿನ ವೈಖಾನಸ ಪುರೋಹಿತರ ವಾರಸುದಾರರಿಗೆ ತಾವೇ ಶ್ರೀವೈಷ್ಣವ ದೀಕ್ಷೆಯನ್ನಿತ್ತು ನಿಯಮಿಸಿದರು ಆಳ್ವಾರರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲೂ ಏರ್ಪಾಡು ಮಾಡಿದರು ಆದರೆ ಹಲವು ಆಳ್ವಾರರು ಈ ಪರ್ವತವನ್ನು ಕಾಲಿನಿಂದ ತುಳಿದು ಏರುವುದು ಅಪವಿತ್ರ ಎಂದೇ ಭಾವಿಸಿದ್ದವರಾದುದರಿಂದ ಅವರೆಲ್ಲರ ವಿಗ್ರಹಗಳನ್ನೂ ತಿರುಪತಿಯಲ್ಲಿ ನೂತನವಾಗಿ ನಿರ್ಮಿತವಾಗಿದ್ದ ಶ್ರೀ ಗೋವಿಂದರಾಜಸ್ವಾಮಿ ಆಲಯದ ಆವರಣದಲ್ಲಿ ಪ್ರತಿಷ್ಠಾಪಿಸಿದರು

ಶ್ರೀ ರಾಮಾನುಜರಿಗಿದ್ದಂತಹ ಭಕ್ತಿ ಪ್ರಪತ್ತಿಗಳೇ ಅವರ ಶಿಷ್ಯರಿಗೂ ಇದ್ದು, ಅನಂತ ಸೂರಿಯು (ಆನಂದಾಳ್ವಾನ್) ತಮ್ಮ ಗುರುಗಳ ಆಜ್ಞೆಯಂತೆ ತಿರುಮಲೆಯಲ್ಲಿ ವಾಸ ಹೂಡಿದರು ಭಗವದ್ರಾಮಾನುಜರ ಹೆಸರಿನಲ್ಲಿ ಹೂದೋಟವನ್ನು ಬೆಳೆಸಿ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಗೆ ಪ್ರತಿನಿತ್ಯ ಹೂವುಗಳನ್ನು ಹೊಂದಿಸಿಕೊಡುವ ಕೈಂಕರ್ಯವನ್ನು ಕೈಗೆತ್ತಿಕೊಂಡರು ಅನಂತ ಸೂರಿಗಳ ಆದರ್ಶ ಪಥದಲ್ಲಿಯೇ ಮುಂದಿನ ತಲೆಮಾರುಗಳ ಹಲವಾರು ಏಕಾಂಗಿಗಳೂ, ಜೀಯರುಗಳೂ ನಡೆದು ಹೂದೋಟಗಳನ್ನು ಬೆಳೆಸಿ ಸ್ವಾಮಿಯ ಸೇವೆಯಲ್ಲಿ ಜೀವ ಸವೆಸಿದರು ಶ್ರೀವೈಷ್ಣವರಲ್ಲಿ ಒಂದಿಬ್ಬರು ಪ್ರಮುಖರು ಉದಾಹರಣೆಗೆ - ಉಡೆಯವರ್ ಕೋಯಿಲ್ ಅಣ್ಣನ್ ಅಥವಾ ಅನ್ನಸಂಧಾನಂ ತಿರುವೆಂಕಟದಾಸರ್ (274 ತಿ ತಿ ) ಹಸ್ತಿಗಿರಿ ದಾಸರ್ (341 ತಿ ತಿ ) ತಮ್ಮ ಗುರುಗಳು ನಡೆದ ಹಾದಿಯಲ್ಲಿ ತಾವೂ ನಡೆದು ಇಂತಹವೇ ಸ್ವಾಮಿ ಕೈಂಕರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು

ಭಗವದ್ರಾಮಾನುಜರ ಪ್ರಭಾವದ ಮತ್ತೊಂದು ಪ್ರಧಾನಾಂಗವೆಂದರೆ ಆಳ್ವಾರರುಗಳ ವಿಗ್ರಹ ಪ್ರತಿಷ್ಠಾಪನೆ, ನಂತರದ ಕಾಲದಲ್ಲಿ ಸ್ವ ವಿಗ್ರಹದ ಅನುಮೋದನೆ ಹಾಗೂ ದೈವತ್ವಕ್ಕೇರಿದ ಆಳ್ವಾರರ ನಿತ್ಯಪೂಜಾ ಕೈಂಕರ್ಯಕ್ಕೆ ಜೀಯರುಗಳ ಏರ್ಪಾಡು ಮಾಡಿದ್ದು. ದೃಷ್ಟಾಂತವೆಂದರೆ ಶಕವರ್ಷ 1397 ರಲ್ಲಿ (145 ಜಿ ಟಿ ) ತಿರುಪತಿಯ ಶ್ರೀ ರಾಮಾನುಜ ಆಲಯವನ್ನು ಯತಿರಾಜ ಜೀಯರು ನಿರ್ವಹಿಸುತ್ತಿದ್ದರು ಹಾಗೂ ಶಕವರ್ಷ 1436 ರಲ್ಲಿ (ಜಿ.ಟಿ 203) ತಿರುಪತಿಯ ನಮ್ಮಾಳ್ವಾರ್ ಆಲಯವನ್ನು ಮತ್ತೊಬ್ಬ ಯತಿರಾಜ ಜೀಯರ್ ನೋಡಿಕೊಳ್ಳುತ್ತಿದ್ದರು ಇದರಂತೆಯೇ ತಿರುಮಂಗೈ ಆಳ್ವಾರ್ ಆಲಯವು ಹಲವು ಏಕಾಕಿ ಶ್ರೀವೈಷ್ಣವರ ನಿರ್ವಹಣೆಯಲ್ಲಿದ್ದಿತು (333 - ತಿ ತಿ ) ಜೊತೆಗೆ ಇಂದೂ ಕಂಗೊಳಿಸುತ್ತಿರುವ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿನ ಶ್ರೀ ರಾಮಾಲಯದಲ್ಲಿನ ಉಡೆಯವರ (ಭಗವದ್ರಾಮಾನುಜರ) ಆಲಯಗಳು, ಅಲಿಪಿರಿಯಲ್ಲಿ ಜೀರ್ಣವಾಗಿರುವ ಪೆರಿಯಾಳ್ವಾರ್ ಆಲಯ, ಕಪಿಲತೀರ್ಥದಲ್ಲಿನ ನಮ್ಮಾಳ್ವಾರ್ ಆಲಯ, ಗೋವಿಂದರಾಜಸ್ವಾಮಿ ಆಲಯದ ಇತರ ಆಳ್ವಾರರ ಆಲಯಗಳು ಈ ದಿಸೆಯಲ್ಲಿ ರಾಮಾನುಜರ ಪ್ರಭಾವವನ್ನು ಗುರುತಿಸುತ್ತವೆ

ಹೀಗಾಗಿ ತಿರುಮಲೆಯ ಆಲಯದಲ್ಲಿ ಶ್ರೀರಾಮಾನುಜರ ಪ್ರಭಾವವನ್ನು ಈ ರೀತಿ ಸಂಗ್ರಹಿಸಬಹುದು

ಮೊದಲನೆಯದಾಗಿ ತಿರುಮಲೆಯಲ್ಲಿ ನಂದನ ವನಗಳನ್ನುಂಟಾಗಿಸಿ ಸ್ವಾಮಿಯ ಸೇವೆಯಲ್ಲಿ ನಿರಂತರವಾಗಿ ಹೂವುಗಳು ದೊರೆಯುವಂತೆ ಈ ಉದ್ಯಾನವನಗಳನ್ನು ನೋಡಿಕೊಳ್ಳಲು ಏಕಾಂಗಿಗಳನ್ನು ನೇಮಕ ಮಾಡಿದ್ದು

ತಿರುಮಲೆಕ್ಕೆ ಆಳ್ವಾರ್, ಮೊದಲಾದ ಆಳ್ವಾರರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದು ಮೂರನೆಯದಾಗಿ ರಾಮಾನುಜ ಪಂಥ ನೆಲೆಯೂರಿದ್ದರ ಗುರುತಾಗಿ ಹಲವು ಶ್ರೀವೈಷ್ಣವ ಮಠಗಳು ಸ್ಥಾಪಿತವಾದವು. ತಿರುಮಲೆಕ್ಕೈ ಪ್ಪಿರಂ ಮಠಂ - ಈ ಒಂದು ರೀತಿಗೇ ಸೇರಿದೆ (ತಿ.ತಿ 335) ವಣ್ ಶಠಗೋಪ ಮಠಂ (276 ತಿ ತಿ ) ಪೇರರುಳಾಳನ್ ಮಠಂ ಮೊದಲಾದವುಗಳು ಪ್ರಾಯಶಃ ಶ್ರೀವೈಷ್ಣವ ಪಂಥದ ಶಿಕ್ಷಣದ ಉದ್ದೇಶಗಳಿಂದಾಗಿ ಈ ಮಠಗಳು ಸ್ಥಾಪಿತವಾಗಿ ಧರ್ಮಪ್ರಸಾರದಲ್ಲಿ ತೊಡಗಿರಬೇಕು

**ನಾಲ್ಕನೆಯದಾಗಿ** ರಾಮಾನುಜರ ವಿಗ್ರಹ ಪ್ರತಿಷ್ಠಾಪನೆಯಿಂದಾಗಿ, ಅವರ ಶಿಷ್ಯ ಪ್ರಶಿಷ್ಯ ಅನುಯಾಯಿಗಳಲ್ಲಿ ತಮ್ಮ ದಾನ, ದತ್ತಿ, ಸೇವೆಗಳಿಗೆ ಭಗವದ್ರಾಮಾನುಜರ ಹೆಸರನ್ನು ಸೇರಿಸಿ ಧನ್ಯರಾಗುವ ಉತ್ಸಾಹ ಭಕ್ತಿಗಳುಂಟಾಗುವಂತಾಯಿತು ಸಾಳುವ ನರಸಿಂಹ (8 ಜಿ.ಟಿ) ಹಾಗೂ ರಾಮನಾಯಕರ್ ಗಳಿಂದ (306 ತಿ ತಿ ) ಉಚಿತ ಭೋಜನ ಸೌಕರ್ಯದ ಏರ್ಪಾಡುಗಳಾಗಿ, ಇವು ರಾಮಾನುಜ ಕೂಟಗಳೆಂದು ಹೆಸರಾದವು. ಹೂದೋಟಗಳಲ್ಲಿ ಮೊದಲನೆಯದು ಅನಂತ ಸೂರಿಯಿಂದ (ಆನಂದಾಳ್ವಾರ್) ಆರಂಭವಾಗಿ ರಾಮಾನುಜ ನಂದನ ವನವೆಂಬ ಹೆಸರಾಯಿತು ರಾಮಾನುಜ ಏರಿ ಅಥವಾ ರಾಮಾನುಜ ಪುಷ್ಕೇರಿ (311, 340 ತಿ ತಿ ) ರಾಮಾನುಜ ತಿರುವೀಧಿ (ತಿ ತಿ 314) ಮೊದಲಾದವುಗಳೆಲ್ಲ ತಲೆಮಾರಿನಿಂದ ತಲೆಮಾರಿಗೆ ಹರಿದು ಬರುತ್ತಿರುವ ರಾಮಾನುಜರ ಪ್ರಭಾವವನ್ನು ಸೂಚಿಸುತ್ತವೆ.

**ಐದನೆಯದಾಗಿ** ಶಾತ್ತಾದವರೂ, ಶಾತ್ತಿನವರೂ (200 ತಿ ತಿ ) ಸೇರಿದಂತೆ ಏಕಾಂಗಿಗಳು, ಶ್ರೀವೈಷ್ಣವ ಪುರೋಹಿತರೂ ತಿರುವಾಯ್ಮೊಳಿ, (333 ತಿ.ತಿ ) ಇಯಲ್ಪಾ, (211 ತಿ ತಿ ) ನೂಟ್ರಂದಾದಿಗಳನ್ನು (58 ಜಿ ಟಿ.) ಇತರ ಆಳ್ವಾರರ ಪ್ರಬಂಧಗಳನ್ನು ಉತ್ಸವ, ಮೆರವಣಿಗೆಗಳಲ್ಲಿ ದೇವರ ಮುಂದೆ ಹಾಡುವುದು ನಂತರದ ದಿನಗಳಲ್ಲಿ, ರಾಮಾನುಜರು ಆಳ್ವಾರರ ಬಗ್ಗೆ ಹೊಂದಿದ್ದ ಅತ್ಯಂತ ಆದರ ಭಕ್ತಿಗಳಿಂದಾಗಿ ನಿತ್ಯ ಪದ್ಧತಿಯಾಯಿತು

**ಆರನೆಯದಾಗಿ,** ಆಲಯಗಳಲ್ಲಿ ನಡೆಯಲಾಗುತ್ತಿರುವ ಅಧ್ಯಯನೋತ್ಸವಗಳು ರಾಮಾನುಜರಿಂದ ಆರಂಭಿಸಲ್ಪಟ್ಟ ನೂತನ ಸಂಪ್ರದಾಯ ಆಗದಿದ್ದರೂ ಅವರು ದೈನಂದಿನ ಪೂಜಾಪದ್ಧತಿಯಲ್ಲಿ ಬಲವಾಗಿ ಅವಧಾರಣೆ ನೀಡಿದ ಪ್ರಕ್ರಿಯೆಯಾಗಿ, ತಮಿಳಿನಲ್ಲಿ ದ್ರಾವಿಡ ವೇದವೆಂದು ಕರೆಯಲ್ಪಟ್ಟ ಭಕ್ತರ ಅತ್ಯಂತ ಆದರ ಗೌರವಗಳಿಗೆ ಪಾತ್ರವಾದ ನಾಲಾಯಿರ ದಿವ್ಯಪ್ರಬಂಧಗಳನ್ನು ಹಾಡಿದ ಆಳ್ವಾರರ ಜೀವನ ಸಾಹಿತ್ಯಗಳ ನೆನಪನ್ನು ಚಿರಗೊಳಿಸದವಂತಾಯಿತು

**ಕಡೆಯದಾಗಿ** ವಿಷ್ಣು ಆಲಯಗಳಲ್ಲಿ ದಿನವೂ ನಾಲಾಯಿರ ಪ್ರಬಂಧಗಳನ್ನು ಹಾಡುವುದು 20 ರಿಂದ 25 ದಿನಗಳ ಅಧ್ಯಯನೋತ್ಸವ ನಡೆಸುವುದು ರಾಮಾನುಜರು ಸ್ಥಾಪನೆ ಮಾಡಿದ ಪದ್ಧತಿಯಾಗಿದೆ ವೇದಗಳು ಮೂಲದಲ್ಲಿ ಸಂಸ್ಕೃತ ಭಾಷೆಯಲ್ಲಿದ್ದು ಸಾಮಾನ್ಯ ಜನರಿಗೆ ನಿಲುಕದ ಪರಿಸ್ಥಿತಿಯಿದ್ದಾಗ, ಸಾಮಾನ್ಯ ಜನತೆಯ ಬಗ್ಗೆ ಅಪಾರವಾದ ಸಹಾನುಭೂತಿ ಹೊಂದಿದ್ದ ರಾಮಾನುಜರು ಆಲಯಗಳಲ್ಲಿ ಪ್ರಬಂಧಗಳನ್ನು ಹಾಡುವ ಪದ್ಧತಿಯ ಪ್ರಸಾರದಿಂದಾಗಿ ಸಾಮಾನ್ಯ ಜನರಿಗೂ ಜಾತಿ ಮತ ಪಂಥಗಳ ವ್ಯತ್ಯಾಸವಿಲ್ಲದಂತೆ ಅತ್ಯಂತ ಹಿರಿಯ ಮಟ್ಟದ ಜ್ಞಾನ ಸುಲಭವಾಗಿ ಕೈಗೆ ಎಟುಕುವಂತೆ ಆಯಿತು

ಸಂಕ್ಷಿಪ್ತವಾಗಿ ಹೇಳುವುದಾದರೆ ಭಗವದ್ರಾಮಾನುಜರ ಜೀವನ ಪರ್ಯಂತವಾದ ಧಾರ್ಮಿಕ ಕ್ರಿಯಾಕಲಾಪಗಳು ಅವರ ನಂತರವೂ ಮುಂದುವರಿದು ಆಲಯ ಪೂಜೆಯಲ್ಲಿ ನಿಯಮಿತವಾದ ವ್ಯವಸ್ಥಿತವಾದ ಪದ್ಧತಿಯುಂಟಾಗುವಂತಾಗಿ, ದೇವರ ನಿತ್ಯಪೂಜೆ ನೈವೇದ್ಯಗಳಿಗೆ ಗಟ್ಟಿಯಾದ ಪ್ರಾವಧಾನ ಉಂಟಾಗುವಂತಾಯಿತು ಆಲಯಗಳಿಗೆ ಶಾಶ್ವತವಾದ ದಾನ ದತ್ತಿಗಳು ಸೇರುವಂತಾಯಿತು ರಾಮಾನುಜರ ಶಿಷ್ಯರು ಪ್ರಶಿಷ್ಯರು ಬೇರೆ ಬೇರೆ ವೈಷ್ಣವ ಕೇಂದ್ರಗಳಲ್ಲಿ ಆಚಾರ್ಯಪುರುಷರಾಗಿ, ಶ್ರೀವೈಷ್ಣವ ಪಂಥವನ್ನು ಪ್ರಸಾರ ಮಾಡುವಂತೆ ಆಯಿತು ತಿರುಪತಿಯಲ್ಲಿನ **ಆಚಾರ್ಯ ಪುರುಷರೆಂದು ಆನಂದಾಂಪಿಳ್ಳೈ (ತಿ.ತಿ.** 224, 233) ಕಂದಾಡೈ (3 ತಿ ತಿ ) (61 ಜಿ ಟಿ ) ತೋಳಪ್ಪರ್ (98 ಜಿ ಟಿ ) ಪ್ರತಿವಾದಿ ಭಯಂಕರ (63 ಜಿ.ಟಿ ) ಪರವಸ್ತು (203 ಜಿ ಟಿ ) ಮನೆತನಗಳವರು ಪ್ರಸಿದ್ಧರಾದರು ಕೊನೆಯದಾಗಿ ಮುಖ್ಯ ಆಲಯಗಳಲ್ಲಿನ ಕೈಂಕರ್ಯ ನಡೆಸಲು ಏಕಾಂಗಿಗಳನ್ನು ತಯಾರು ಮಾಡಲಾಯಿತು

## ಪಲ್ಲವರ ಕಾಲದಿಂದ ವಿಜಯನಗರದರಸರ ವರೆಗೆ ಆಲಯ ಚಿತ್ರ

ಒಂದು ದೈವ ವಿಗ್ರಹ ಪ್ರತಿಷ್ಠೆಯಾದಮೇಲೆ ಅತ್ಯಗತ್ಯ ಸಾಹಿತ್ಯವೆಂದರೆ ಭಕ್ತರು ದೇವರನ್ನು **ನೋಡಲು ಅನುಕೂಲವಾಗುವಂತೆ** ಬೆಳಕು ನೀಡುವ ದೀಪದ ಹಾಗೂ ದೇವರ ಪೂಜೆಗೆ ತಕ್ಕ ಹೂವು ಹಣ್ಣು ನಿವೇದನೆಗಳು 1 ನೆಯ ಶಾಸನದಂತೆ ಉಲಗಪ್ಪೆರುಮಾನಾರನು ಮೂವತ್ತು ಕಳಂಜು ಹೊನ್ನನ್ನು ನೀಡಿ ತಿರುವಿಳಂಕೋಯಿಲ್ - ಪೆರುಮಾನಡಿಗಳ ಸನ್ನಿಧಿಯಲ್ಲಿ ಒಂದು ನಂದಾದೀಪವನ್ನು ಏರ್ಪಡಿಸುವಂತಾಗಿಸಿದನು 2 ನೇ ಶಾಸನದಲ್ಲಿ ಪಲ್ಲವರಾಜ ವಿಜಯದಂತಿ ವಿಕ್ರಮ ವರ್ಮನ ಆಳ್ವಿಕೆಯ ಕಾಲದಲ್ಲಿ ಸಿಯಗನ್ ಅಥವಾ ಸಿಯ ಗಂಗನ್ ಆಲಯದಲ್ಲಿ ದೇವರ ಮುಂದೆ ನಂದಾದೀಪದ ಏರ್ಪಾಡು ಮಾಡಿದ ಪಲ್ಲವ ರಾಣಿ ಸಾಮವೈ ತಾನು ಪ್ರತಿಷ್ಠಿಸಿದ ಮಣವಾಳಪ್ಪೆರುಮಾಳರ ಸನ್ನಿಧಿಯಲ್ಲಿ ನಂದಾದೀಪದ ಏರ್ಪಾಡು ಮಾಡಿದಳು 12 ನೇ ಶಾಸನದ ಕೊಡುಂಗೋಲೂರನ ಹಾಗೂ 13 ನೇ ಶಾಸನದಲ್ಲಿನ ನಂದಾದೀಪಗಳಂತೂ ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿಯೇ ಏರ್ಪಾಡಾಗಿದ್ದವು. ಅಲ್ಲಿಂದ 14 ನೇ ಶತಮಾನದವರೆಗೆ ಸುಮಾರು ನಲವತ್ತು ನಂದಾದೀಪಗಳ ಏರ್ಪಾಡುಗಳನ್ನು ನಾವು ಕಾಣಬಹುದಾಗಿದೆ 19 ನೇ ಶಾಸನದಲ್ಲಿ ತಿರುಮಂಡಿಯಂ ಸಭೆಯವರು ತಮಗೆ ನಿಗಧಿಯಾಗಿದ್ದ 24 ನಂದಾದೀಪಗಳ ಹಾಗೂ ಒಂದು ಕರ್ಪೂರದ ದೀಪಗಳನ್ನು ಬೆಳಗದೆ ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಲ್ಲಿ ಕರ್ಪೂರ ದೀಪದ ಜೊತೆಗೆ ಎರಡೇ ದೀಪಗಳನ್ನು ಹತ್ತಿಸುತ್ತಿದ್ದಿದ್ದುದನ್ನು ಕಾಣಬಹುದು

ಪ್ರಾಂತೀಯ **ಅಧಿಕಾರಿಯು** ತಿರುಚಾನೂರಿನ ಸರ್ಕಾರೀ ಕಟ್ಟಡದಲ್ಲಿ ಓಲಗವನ್ನೇರ್ಪಡಿಸಿ ವಿಷಯವನ್ನು ಸವಿವರವಾಗಿ ತಿಳಿದುಕೊಂಡು 24 ದೀಪಗಳ ಬೆಳಗಿಸಲು ಏರ್ಪಾಡು ಮಾಡಿದನು.

123 **ನೇ ಶಾಸನವು** ಆಲಯಕ್ಕೆ ನೀಡಿದ ಆರು ದೀಪದ ಕಂಭಗಳನ್ನು ಕುರಿತು ಹೇಳಿದರೆ,

132 ನೇ ಶಾಸನವು ಆಲಯದಲ್ಲಿ ಬೆಳಗಿದ ನಾಲ್ಕು ನಂದಾದೀಪಗಳ ಬಗ್ಗೆ ಹೇಳುತ್ತದೆ. ಇದುವರೆಗೆ ನಂದಾದೀಪಗಳನ್ನು ತಿರುಮಲೆಯ ಆಲಯದಲ್ಲಿ ಏರ್ಪಾಡು ಮಾಡುವಲ್ಲಿ ಧಾರಾಳತೆಯನ್ನು ಕಾಣಬಹುದಾಗಿದೆ

ಅನ್ನಪ್ರಸಾದಗಳ ನಿವೇದನೆಯ ವಿಷಯದಲ್ಲಿ ಬಹು ಪೂರ್ವದಲ್ಲಿ ಬಾಣ ರಾಜ ವಿಜಯಾದಿ

ತ್ತನ ಕಾಲದಲ್ಲಿಯೇ ನೈವೇದ್ಯದ ಏರ್ಪಾಡಾದು ದನ್ನು 4 ನೇ ಶಾಸನದಲ್ಲಿಯೂ ಗಂಗೈ ಗಂಗನ್ ರಣಸಿಂಗನ 27 ನೇ ಶಾಸನದಲ್ಲಿ ಹಾಲು ಮೊಸ ರುಗಳ ನಿಮಂದನವನ್ನು ಕಾಣುತ್ತೇವೆ ನಂತ ರದ ಕಾಲದಲ್ಲಿ ಮೂಡಲ ಸಂಧಿ (ಮೊದಲ ನಿವೇದನೆ) ಯು ಧನಿಷ್ಠ ದಿನದಂದು ನಡೆ ಯುವಂತೆ 155 ರಲ್ಲಿಯೂ, ಸಿತಕರಗಂಡನ್ ಸಂಧಿಯಲ್ಲಿನ ನೈವೇದ್ಯ 102 ರಲ್ಲಿಯೂ, ತಿರು ಮಂತ್ರ ತಿರುಪ್ಪಾನಕವನ್ನು 82 ರಲ್ಲಿಯೂ ಕಾಣ ಬಹುದು ಆದರೆ ಹದಿಮೂರನೆ ಶತಮಾನ ದಲ್ಲಿ ಒಂದೊಮ್ಮೆ ನಿವೇದನೆಗಳ ಪ್ರಮಾಣ ಕಡ ಮೆಯಾಗಿ ಕಂಡುಬಂದಾಗ ಸ್ಥಾನತ್ತಾರರು ಹೆಚ್ಚಿನ ಸಾಗುವಳಿ ಭೂಮಿಯ ಕಾಣಿಕೆಗಳನ್ನು ಬಯ ಸಿದಾಗ, ಅವರ ಬಯಕೆಯಂತೆ ತಿರುಕಾಳತ್ತಿ ದೇವರಾಯ ಯಾದವರಾಯನು ಕುಡವೂರು ನಾಡನ್ನು ದೇವದಾನ ಗ್ರಾಮವಾಗಿ ಶಾಶ್ವತ ದಾನ ವಾಗಿ ತನ್ನ ಆಡಳಿತದ ಹತ್ತೊಂಬತ್ತನೆಯ ವರ್ಷ ದಲ್ಲಿ ನೀಡಿದನು (ತಿ ತಿ 81 - 1209 - 10) ಕ್ರಿಶ 1245 ರಲ್ಲಿ 43 ನೇ ಶಾಸನದಲ್ಲಿ ಸ್ಥಾನತ್ತಾ ರರ ಅಪೇಕ್ಷೆಯಂತೆ ಜಮೀನಿನ ದಾನ ನೀಡಲಾ ಗಿದೆ ಶಾಸನಗಳಲ್ಲಿ ಭೂಮಿಯ, ಧನದ ದಾನ ಗಳನ್ನು ನೀಡಿರುವುದು ನಮ್ಮ ಗಮನಕ್ಕೆ ಬಂದಿದೆ ಕಾವೇರಿ ನದಿಯ ದಕ್ಷಿಣಕ್ಕಿದ್ದ ಹಲವು ಭೂಮಿ, ಗ್ರಾಮಗಳ ದಾನವನ್ನು 13 ನೇ ಶತಮಾನದಲ್ಲಿ ಜಟಾವರ್ಮ ಸುಂದರ ಪಾಂಡ್ಯನು ಪುನಃ ನವೀಕ ರಿಸಿದನು ತಿರುಪತಿಯ ಬಳಿಯ ಆರು ಹಳ್ಳಿಗ ಳನ್ನು ಇವುಗಳೊಂದಿಗೆ ಯಾದವರಾಯ ಪ್ರಭು ಗಳು ಆಲಯಕ್ಕೆ ನೀಡಿದ್ದರು

ಅರಣ್ಯಪ್ರದೇಶದಿಂದ ಆವೃತವಾಗಿರುವ ವೆಂಕಟಾಚಲದಲ್ಲಿ ವನಸುಮ ಗಳು ಬೆಳೆಯುತ್ತಿದ್ದಿರ ಬಹುದಾದರೂ ಅವುಗ ಳನ್ನು ಸ್ವಾಮಿಯ ಪೂಜೆಯಲ್ಲಿ ಬಳಸುವಂತೆ ಇರ ಲಿಲ್ಲವೆಂದು ಕಾಣುತ್ತದೆ ಹೀಗಾಗಿ ಹಲವಾರು ಭಕ್ತರು ತಿರುಮಲೆಯಲ್ಲಿ ಪುಷ್ಪೋದ್ಯಾನಗಳನ್ನು ನಿರ್ಮಿಸಿ, ಸ್ವಾಮಿಯ ಪೂಜೆಗೆ ನಿತ್ಯವೂ ಹೂಗ ಳನ್ನು ಹೊಂದಿಸುವ ಹಾಗೂ ಹಬ್ಬ ಹರಿದಿನಗ ಳಲ್ಲಿ ಹೆಚ್ಚಿನ ಪುಷ್ಪ ಕೈಂಕರ್ಯ ಮಾಡುವ ಕಾರ್ಯ ದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು ಈ ಉದ್ಯಾನ ವನಗಳಲ್ಲಿ ನೆರಳಿಗಾಗಿ ಹಲವು ಭಕ್ತರು ಮಂಟಪಗಳನ್ನು ನಿರ್ಮಿಸಿದರು ಈ ಉತ್ಸವ ಗಳಲ್ಲಿ ಮೆರವಣಿಗೆಯಲ್ಲಿ ದೇವರು ಆಗಮಿಸು ತ್ತಿರುವಾಗ ಈ ಮಂಟಪಗಳಿಗೂ ಬರುವಂತೆ ಅಪೇಕ್ಷಿಸಿದರು ಇಲ್ಲಿ ಉತ್ಸವ ಮೂರ್ತಿಗಳಿಗೆ ತಿರುಪ್ಪಾನಕ (ಅಕ್ಕಿ ಹೆಸರು ಬೇಳೆ, ಮೆಣಸು ಗಳಿಂದ ಮಾಡಿದ ಪೊಂಗಲು) ಅಪ್ಪ ನಿವೇದ ನೆಯ ಏರ್ಪಾಡಿಗೂ ಸಾಹಿತ್ಯ ವನ್ನೊದಗಿಸಿದರು ಇವುಗಳನ್ನು ನೆರೆದ ಭಕ್ತರಲ್ಲಿ ಹಂಚುವ ವಾಡಿಕೆ ಯಿದ್ದಿತು ಒಂದು ಹಿರಿಯ ಭಾಗ ಆಲಯದ ಅಧಿಕಾರಿಗಳಿಗೂ ಸೇರುತ್ತಿದ್ದಿತು ಇಂತಹ ಭಕ್ತರ ನೆರವಿಯನ್ನೂ ಪ್ರಸಾದ ವಿತರಣೆಯನ್ನೂ ತಿರು ವಿಳಕ್ಕಂ ಎಂದು ಕರೆಯುತ್ತಿದ್ದರು

ಸಾಮವೈ ರಾಣಿಯು ಪ್ರವೇಶಗೊಳಿಸಿದ ಎರಡು ಉತ್ಸವಗಳಲ್ಲಿ ಒಂದು ಪುರಟ್ಟಾಸಿಯದು ಇಂದಿಗೂ ಮುಂದುವರೆದಿದೆ ಮಾರ್ಗಳಿ ತಿಂಗ ಳಿನ ಇನ್ನೊಂದು ಉತ್ಸವ ನಿಂತು ಹೋಗಿರುವಂತೆ ತೋರುವುದು ಹದಿಮೂರನೆಯ ಶತಮಾನದ ಮೂರನೆಯ ಭಾಗದ (ಕಾಲುಭಾಗದ) 111 ನೆಯ ತಿ ತಿ ಶಾಸನವು ಶ್ರೀ ವೆಂಕಟೇಶ್ವರಸ್ವಾ ಮಿಯ ಪುರಟ್ಟಾಸಿ ಉತ್ಸವವನ್ನು ಉಲ್ಲೇಖಿಸಿದರೆ 652 ತಿ ತಿ ಹಾಗೂ 119 ತಿ ತಿ ಗಳು ಪುರ ಟ್ಟಾಸಿ ಚಿತ್ತಿರೈ ಉತ್ಸವಗಳನ್ನು ಕುರಿತು ಹೇಳು ತ್ತವೆ ಕ್ರಿಶ 1330 ರಲ್ಲಿ ತನ್ನ ಆಡಳಿತದ ಒಂಬ ತ್ತನೆಯ ವರ್ಷದಲ್ಲಿ ತಿರುವೆಂಕಟನಾಥ ಯಾದ ವರಾಯನು ಆಡಿ ಮಾಸದಲ್ಲಿ ಒಂದು ಹೊಸ ಉತ್ಸವವನ್ನು ಏರ್ಪಡಿಸಿ ಅದರ ವೆಚ್ಚಗಳಿಗಾಗಿ ನಲವತ್ತು ವಿವಿಧ ರೀತಿಯ ಸುಂಕಗಳನ್ನು ಒಳ ಗೊಂಡ ಪೊಂಗನಲ್ಲೂರು ಗ್ರಾಮದ ಅರ್ಧಭಾ ಗವನ್ನು ಸರ್ವಮಾನ್ಯವಾಗಿ ನೀಡಿದನು (ಜಿ ಟಿ 125) ಹದಿನಾಲ್ಕನೇ ಶತಮಾನದ ಪೂರ್ವದಲ್ಲಿ ಮೂರು ಉತ್ಸವಗಳು ಶ್ರೀ ವೆಂಕಟೇಶ್ವರಸ್ವಾಮಿ ಗಾಗಿ ನಡೆಯುತ್ತಿದ್ದಿತೆಂದು ಇದುವರೆಗೆ ಕಂಡು ಬಂದಿದೆ.

ಈ ಮೂರು ಉತ್ಸವಗಳ ಜೊತೆಗೇ ಧ್ವಜಸ್ತಂ ಭದ ಮೇಲೆ ಗರುಡಧ್ವಜವನ್ನು ಏರಿಸಿ ಹಾರಿಸು ವುದರಿಂದ ಆರಂಭವಾಗುವ ತಿರುಕ್ಕೊಡಿ ತಿರು ನಾಳ್ ಮೊದಲಾಗಿ ಇತರ ಉತ್ಸವಗಳೂ ಆಲ ಯದಲ್ಲಿ ನಡೆಯುತ್ತಿದ್ದವು. ಮಾರ್ಚ್ ಏಪ್ರಿಲ್ ತಿಂಗಳುಗಳ ವಸಂತ ಋತುವಿನಲ್ಲಿ ನಡೆಯುತ್ತಿ ದ್ದಿರಬಹುದಾದ ವಸಂತೋತ್ಸವದ ಬಗ್ಗೆ ಕ್ರಿ.ಶ 1360 ರಲ್ಲಿನ 337 ತಿ ತಿ ಶಾಸನದಲ್ಲಿ ಉಲ್ಲೇ ಖಿವಿದೆ ತಿ ತಿ 116 ಶಾಸನವು ಮೇ - ಜೂನ್ ತಿಂಗಳ ಬೇಸಿಗೆಯಲ್ಲಿ ನಡೆಯುತ್ತಿದ್ದ ತಿರುಕ್ಕೊಡಿ ತಿರುನಾಳನ್ನು ಗುರುತಿಸುತ್ತದೆ

ಹಲವಾರು ಆಳ್ವಾರರುಗಳ ವಿಗ್ರಹ ಪ್ರತಿಷ್ಠಾ ಪನೆಯೂ ಈ ಕಾಲದಲ್ಲಿ ನಡೆಯಿತೆಂಬು ದನ್ನು ಗಮನಿಸಬೇಕು ಮೂರನೇ ರಾಜರಾಜ ಚೋಳನ ಕಾಲದಲ್ಲಿ (ಜಿ ಟಿ 26 - ಕ್ರಿಶ 1255) ಸ್ಥಾಪಿತವಾದ ತಿರುಮಂಗೈ ಆಳ್ವಾರರ ವಿಗ್ರಹ ಮೊದಲನೆಯದು ಈ ಶಾಸನದಲ್ಲಿ ಕುಡವೂರು ನಾಡಿನ ಸಾರ್ವಜನಿಕರು ಶ್ರೀ ಗೋವಿಂದರಾಜ ಸ್ವಾಮಿ ಆಲಯದಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಿ ದರೆಂದೂ ಅದರ ಪೂಜೆಗೆ ಹಲವು ದಾನಗಳನ್ನು ನೀಡಿದರೆಂದೂ ಹೇಳಲಾಗಿದೆ. ತಿರುವೆಂಕಟ ನಾಥ ಯಾದವರಾಯನು ಶ್ರೀ ವೆಂಕಟೇಶ್ವರಸ್ವಾ ಮಿಗೆ 1330 - 31 ರಲ್ಲಿ ಪೊಂಗಲೂರು ಗ್ರಾಮ ವನ್ನು ದಾನಮಾಡಿದಾಗ ಸಿಂಹರಾಯ ದಂಡ ನಾಯಕನು ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಸ್ಥಾನತ್ತಾರರಿಗೆ ಸಲ್ಲಿಸಿದ ಬೇಡಿಕೆಯಲ್ಲಿ, ತಾನು ಆಡಿ ಮಾಸದಲ್ಲಿ ನಡೆಸಬೇಕೆಂದು ತಿಳಿಸಿದ ಉತ್ಸ ವದ ವೆಚ್ಚಗಳಿಗಾಗಿ ಹಾಗೂ ಸಿತಕರ ಗಂಡನ್ ಸಂಧಿಯಲ್ಲಿ ನಿವೇದನೆಗಾಗಿ, ಮಾತ್ರವೇ ಈ ಗ್ರಾಮಾದಾಯವನ್ನು ಬಳಸದೆ ಮಿಕ್ಕ ಹೆಚ್ಚಿನ ಹಣ ದಿಂದ ವೀರನರಸಿಂಗ ಪೆರುಮಾಳ್ ಹಾಗೂ ತಿರುಮಂಗೈ ಆಳ್ವಾರರಿಗೆ ಒಬ್ಬರಿಗೊಂದು ತಿರು ಪ್ಪಾನಕ ನಿವೇದನೆ ನೀಡಬೇಕೆಂದೂ ಹೇಳಿದ್ದಾನೆ ಸ್ಥಾನತ್ತಾರರು ಅವನ ಬೇಡಿಕೆಯನ್ನು ಒಪ್ಪಿದರು (ತಿ ತಿ - 195 ಪುಟ 105 - 108, 109 ಸಂಪುಟ - 1)

ಮುಂದಕ್ಕೆ ಬಂದರೆ ನಮಗೆ ಕಂಡುಬರುವುದು ಸುಮಾರು ಕ್ರಿಶ 1285 - 1290 ರಲ್ಲಿ ತಿರುಪತಿಯ ಉತ್ತರದಲ್ಲಿ ದಿಟ್ಟದ ತಪ್ಪಲಿನಲ್ಲಿನ ಕಪಿಲತೀರ್ಥದಲ್ಲಿ ಗುಡಿಕಟ್ಟಲಾದ ನಮ್ಮಾಳ್ವಾರ್ ಆಲಯ ಇದರ ನಿರ್ಮಾಣ ಆದದ್ದು ವನೆಡುತ್ತ ಕೈಯಳಗಿಯರ್ ಅಥವಾ ಪಲ್ಲವರಾಯರ್ ಕಾಲ ದಲ್ಲಿ (ಜಿ ಟಿ 201, 202, ತಿ ತಿ - 130)

ಕಪಿಲತೀರ್ಥದ ಪಶ್ಚಿಮಕ್ಕೆ ದಿಟ್ಟದ ಬುಡ ದಲ್ಲಿ ಅಲಿಪಿರಿಯಲ್ಲಿ ಮೆಟ್ಟಿಲ ಹಾದಿ ಆರಂಭವಾ ಗುವ ಸ್ಥಳದಲ್ಲಿ ಗೋದಾದೇವಿಯ ಸಾಕುತಂದೆ ಪೆರಿಯಾಳ್ವಾರರ ಸನ್ನಿಧಿಯಿದೆ. ಈ ಮಂದಿರ ವನ್ನು ಎಂದು ನಿರ್ಮಿಸಲಾಯಿತು, ಆಳ್ವಾರರ ವಿಗ್ರ ಹವನ್ನೆಂದು ಪ್ರತಿಷ್ಠಾಪಿಸಲಾಯಿತು ಎಂಬುದು ತಿಳಿದು ಬಂದಿಲ್ಲ ಆಲಯದ ಗೋಡೆಗಳ ಮೇಲೆ ಯಾತ್ರಿಕರ ದಾಹಾರ್ತಿಯನ್ನು ತೀರಿಸ ಲೆಂದು ತೋಡಿಸಿದ ಎರಡು ಬಾವಿಗಳ ಬಗ್ಗೆ ಶಾಸನಗಳಿವೆ ಒಂದು ಕಾಮವಿಲ್ಲಿ (ಜಿ.ಟಿ

274) ಯಿಂದ ಆದದ್ದು ಮತ್ತೊಂದು ನೀರಿಗಿಳಿಯಲು ಮೆಟ್ಟಿಲುಗಳನ್ನು ಹೊಂದಿದ ಬಾವಿಯಾಗಿದ್ದು ಕ್ರಿ.ಶ 1490 ರ ಜನವರಿ 25 ಕ್ಕೆ ಸಮನಾಗುವ ಶಕವರ್ಷ 1411 ರ ಸೌಮ್ಯವರ್ಷದಲ್ಲಿ ಉತ್ತರಮೇರೂರಿನ ಕಾರವೆಟ್ಟಿ ಪುಲಿ ಆಳ್ವಾರ್ ಮನ್ನಾರ್ ಪಿಳ್ಳೈ ಕಟ್ಟಿಸಿದ್ದು ಇದು ಸಾಳುವ ನರಸಿಂಹನ ಆಳ್ವಿಕೆಯ ಕೊನೆಗಾಲದ ಮುಂಚಿನ ವರ್ಷ ಆಗಿದ್ದು, ಆತ ಲಕ್ಷ್ಮೀ ನರಸಿಂಹಸ್ವಾಮಿಯ ಆಲಯದ ಮೇಲಿನ ಗೋಪುರವನ್ನು ನಿರ್ಮಿಸಿರಬೇಕು (271 ಜಿ. ಟಿ) ಈ ದೊಡ್ಡ ಗೋಪುರ 1930 ರ ಡಿಸೆಂಬರಿನಲ್ಲಿ ಮಳೆಗಾಳಿ ಗಳಲ್ಲಿ ನೆಲಕ್ಕೆ ಒರಗಿತು ಮೊದಲನೆಯ ಬಾವಿಯು 14 ನೇ ಶತಮಾನದಲ್ಲಿ ಕಾಮವಿಲ್ಲಿಯಿಂದ ಕಟ್ಟಿಸಿದ್ದಾಗಿ ಇದು ಒಂದು ಶತಮಾನಕಾಲ ಜೀರ್ಣವಾದ ನಂತರ ಎರಡನೆಯ ಮೆಟ್ಟಿಲ ಬಾವಿಯ ನಿರ್ಮಾಣ ಕ್ರಿ.ಶ 1490 ರಲ್ಲಿ ಆಗಿದ್ದಿರಬೇಕು ಹೀಗಾಗಿ ಈ ಎರಡೂ ಶಾಸನಗಳಿರುವ ಗೋಡೆಗಳನ್ನು ಹೊಂದಿದ ಪೆರಿಯಾಳ್ವಾರ್ ಮಂದಿರವು ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿದ್ದಿರಬಹುದು

ವಿಗ್ರಹ ಪ್ರತಿಷ್ಠಾಪನೆಯಾದ ನಂತರ ಪ್ರಥಮ ಪರಿಕರಗಳಾದ ದೀಪ, ಧೂಪ, ಪುಷ್ಪ ನೈವೇದ್ಯಗಳ ಪ್ರಬಂಧವಾದ ನಂತರ, ಅಲಂಕರಣ ವೈಭವಗಳ ಪಾತ್ರ ಮೊದಲಾಗಿರಬೇಕು ಆಭರಣ ಅಲಂಕಾರಗಳು ಲಾವಣ್ಯ, ಸೌಂದರ್ಯಗಳನ್ನು ನೀಡುತ್ತವೆ ಆಲಯದ ವಿಸ್ತರಣ, ಮಂಟಪಗಳ, ಅಂತರಾಳಗಳ, ಪ್ರಾಕಾರಗಳ ಸೇರ್ಪಡೆಯಿಂದಾಗಿ, ಉತ್ಸವಗಳ ಆಚರಣೆಯಿಂದಾಗಿ ವಿವಿಧ ವಾಹನಗಳ ಮೇಲೇರಿದ ಅಲಂಕರಣಗೊಂಡ ಉತ್ಸವಮೂರ್ತಿಗಳ ಮೆರವಣಿಗೆಯಿಂದಾಗಿ, ಆಲಯದ ಮೂಲ ಮೂರ್ತಿಯ ಪ್ರಸಿದ್ಧಿಗೆ ತಕ್ಕಂತೆ ವೈಭವವನ್ನೂ ಹೆಚ್ಚುಗೊಳಿಸುತ್ತವೆ ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವಗಳು ಆರಂಭದಲ್ಲಿಯೇ ಹೆಚ್ಚಾಗಿದ್ದು ಹದಿಮೂರನೆಯ ಶತಮಾನದ ಹೊತ್ತಿಗೆ ಭರ್ಜರಿಯಾದವು. ಆದರೆ ಆಲಯದ ವಿಸ್ತರಣಕಾರ್ಯಮಾತ್ರ ವಿಜಯನಗರದರಸರ ಕಾಲದಿಂದ ಹದಿನೈದನೆಯ ಶತಮಾನದಲ್ಲಿ ತೊಡಗಿತು

ದೈವದ ವೈಯಕ್ತಿಕ ಅಲಂಕರಣದ ಬೆಳವಣಿಗೆಯೆಂದರೆ ಸಾಮವೈ ರಾಣಿಯು ಮಣವಾಳ ಪ್ಪೆರುಮಾಳ್ ವಿಗ್ರಹದ ಅಲಂಕಾರಕ್ಕಾಗಿ ಮಾತ್ರವೇ ಆಭರಣಗಳನ್ನು ನೀಡಿದಳು ಮೂಲ ವಿಗ್ರಹ ಶ್ರೀ ವೆಂಕಟೇಶ್ವರಸ್ವಾಮಿಗೆ ಸಂದ ಪ್ರಥಮ ಆಭರಣ ಸಮರ್ಪಣೆ ಎಂದರೆ ಎರಡನೇ ಪರಾಂತಕ ಸುಂದರ ಚೋಳನ ರಾಣಿ ಪರಾಂತಕ ದೇವಿ ಅಮ್ಮನು ಆರು ಮಾಣಿಕ್ಯ, ನಾಲ್ಕು ವಜ್ರಗಳು, ಇಪ್ಪತ್ತೆಂಟು ಮುತ್ತುಗಳನ್ನು ಹೊಂದಿದ ಚಿನ್ನದ ಸರವನ್ನು ತನ್ನ ಮಲಮಗ ಒಂದನೇ ರಾಜರಾಜನ ಆಡಳಿತದ 16 ನೇ ವರ್ಷದಲ್ಲಿ (ಕ್ರಿ.ಶ 1001 ರಲ್ಲಿ) ನೀಡಿರುವುದೇ ಆಗಿದೆ ನಂತರದ ಆಭರಣ ಸಮರ್ಪಣೆಯೆಂದರೆ 13 ಅಥವಾ 14 ನೇ ಶತಮಾನದಲ್ಲಿ ತಂಜೈಯ ರಾಜನಾದ ಅಹೋಬಲ ಯಾದವನು ಶ್ರೀವೆಂಕಟೇಶ್ವರಸ್ವಾಮಿಯ ಬಲಗೈ ವರದಹಸ್ತ - ಕಾಲುಗಳನ್ನು ತೋರಿಸುವ - ಹಸ್ತಕ್ಕೆ ನೀಡಿದ ಚಿನ್ನದ ಕವಚವಾಗಿದ್ದಿತು 1 ನೇ ಜಟಾವರ್ಮ ಸುಂದರ ಪಾಂಡ್ಯನು ಗರ್ಭಗುಡಿಯ ಮೇಲಿನ ಗೋಪುರವನ್ನು ಚಿನ್ನದ ಕಳಶದಿಂದ ಅಲಂಕರಿಸಿದಾಗ "ಹೇಮಕಲಶೋಸ್ಥಾಪಿ" - ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಅಲಂಕಾರವೂ ಆಯಿತು ಅವನು ತನ್ನ ಆಳ್ವಿಕೆಯ 5-10 ನೇ ವರ್ಷಗಳ ನಡುವೆ ಉತ್ತರದ ಕಡೆ ಕೃಷ್ಣಾನದಿಯವರೆಗೆ ದಂಡೆತ್ತಿ ಬಂದಾಗ ಸರಿಸುಮಾರು ಕ್ರಿ.ಶ 1256 ರ ಹೊತ್ತಿಗೆ ಈ ಕಾರ್ಯ ನಡೆದಿರಬೇಕು (172 ತಿ.ತಿ) ಇದೇ ಸಮಯದಲ್ಲಿ (ತಿ.ತಿ 371) ವೀರ ನರಸಿಂಹ ಯಾದವರಾಯನು ತನ್ನ ತೂಕದ ಚಿನ್ನದಿಂದ ಗರ್ಭಗುಡಿಯ ವಿಮಾನ ಗೋಪುರಕ್ಕೆ ಚಿನ್ನದ ಗಿಲೀಟು ಮಾಡಿದ ಕವಚವನ್ನು ಪ್ರಾಯಶಃ ತೊಡಿಸಿರಬೇಕು

14 ನೇ ಶತಮಾನದ ಶಾಸನಗಳಲ್ಲಿ ಕೆಲವು ಮರಗಳೂ ಕಂಡುಬರುತ್ತವೆ ಕ್ರಿ ಶ 1330-31 ರಲ್ಲಿ ತಿರುವೆಂಕಟನಾಥಯಾದವರಾಯನ ಆಳ್ವಿಕೆಯ ಒಂಬತ್ತನೆಯ ವರ್ಷದಲ್ಲಿ ಆಡಿಮಾಸದಲ್ಲಿ ನಡೆಸಬೇಕಾದ ಉತ್ಸವಗಳಿಗೂ, ಸಿಂಗಯ ದಂಡನಾಯಕನು ರಾಚಯ ದಂಡನಾಯಕನ ಹೆಸರಿನಲ್ಲಿ ಆರಂಭಿಸಿದ ಸಿತಕರ ಗಂಡನ್ ಸಂಧಿಯ ನೈವೇದ್ಯಕ್ಕಾಗಿಯೂ ಪೊಂಗಲೂರು ಗ್ರಾಮದ ಅರ್ಧ ಆದಾಯವನ್ನು ಸರ್ವಮಾನ್ಯವಾಗಿ ನೀಡಿದ ಆತನು ಸ್ಥಾನತ್ತಾರರನ್ನು ಕೇಳಿಕೊಂಡದ್ದೆಂದರೆ ಈ ಗ್ರಾಮಾದಾಯವನ್ನು ಮೇಲೆ ಹೇಳಿದ ಕೆಲಸಗಳಿಗೆ, ತಿರುಪತಿಯ ವೀರ ನರಸಿಂಗ ಪೆರುಮಾಳ್ ಹಾಗೂ ತಿರುಮಂಗೈ ಆಳ್ವಾರರಿಗೆ ತಿರುಪ್ಪಾನಕ ನೀಡಲೂ, ಮೂವತ್ತೆರಡು ಮಂದಿ ಶ್ರೀವೈಷ್ಣವರಿಗೆ ದಿನವೂ ಸಿತಕರ ಗಂಡ ಮರದಲ್ಲಿ ಭೋಜನ ನೀಡಲೂ ಮಿಕ್ಕ ಧನವನ್ನು ಹೂದೋಟ, ಅರವಟಿಗೆ, ಮೊದಲಾದ ಧರ್ಮಕಾರ್ಯಗಳಲ್ಲಿ ಬಳಸಬೇಕು ಎಂಬುದು (195 ತಿ.ತಿ) ಕ್ರಿ.ಶ 1339 ರಲ್ಲಿನ ಶ್ರೀರಂಗನಾಥ ಯಾದವರಾಯನ ಆಡಳಿತದ ಮೂರನೆಯ ವರ್ಷದಲ್ಲಿ ಹೊರಬಂದ ಶಾಸನದಂತೆ (354 ತಿ.ತಿ) ನಮಗೆ ಸಿತಕರ ಗಂಡ ಮರಗಳು ಎರಡು ಇದ್ದಂತೆಯೂ, ಒಂದು ತಿರುಮಲೆಯಲ್ಲಿ ಒಂದು ತಿರುಪತಿಯಲ್ಲಿ ಇದ್ದಂತೆಯೂ, ತಿರುಮಲೆಯ ಮರಕ್ಕೆ ಎರಡು ನಂದನವನಗಳು ಸೇರಿದ್ದವೆಂದೂ, ಅವುಗಳ ಹೆಸರುಗಳು ಅರಸಿನಾಲಯ ನಂದನವನ ಹಾಗೂ ವನಸ್ಥಕೋಪನ್ ನಂದನವನವೆಂದೂ ತಿಳಿದುಬರುತ್ತದೆ ಈ ಮರಗಳನ್ನು ಸಿಂಗಯನು ಹಲವು ಸನ್ಯಾಸಿಗಳ ವಶಕ್ಕೆ ಒಪ್ಪಿಸಿ, ಅವರು ಮತ್ತೊಬ್ಬ ಏಕಾಂಗಿಗೆ ಆತ ಆಲಯದ ಭಂಡಾರಕ್ಕೆ 1000 ಪಣವನ್ನು ಒಪ್ಪಿಸಿದ ನಂತರ ವನಗಳನ್ನು ಆತನ ವಶಗೊಳಿಸಬೇಕೆಂದೂ ಆತನ ಮರಣಾನಂತರ ಮರಗಳೆರಡೂ ಮತ್ತೆ ಸಿಂಗಯನಿಗೇ ಸೇರುವಂತಾಗಿ ಪುನಃ ನಾಲ್ಕು ನೂರು ಪಣವನ್ನು ಆಲಯ ಭಂಡಾರಕ್ಕೆ ಒಪ್ಪಿಸುವ ಏಕಾಂಗಿಗೆ ಈ ಸನ್ಯಾಸಿಗಳು ವನಗಳನ್ನು ಒಪ್ಪಿಸಬೇಕೆಂದು ನಿಯಮವಾಗಿದ್ದಿತು ಈ ಆಸ್ತಿಗಳನ್ನು ಪಡೆದ ನಂತರ ಏಕಾಂಗಿಯು - ಸೀಯರ್ ಅಥವಾ ಜೀಯರ್ ಉತ್ಸವಗಳ ನಾಲ್ಕನೆಯದಿನ, ಹಾಗೂ ಪಾರುವೇಟೆಯ ಉತ್ಸವಗಳಲ್ಲಿ ಉತ್ಸವ ಮೂರ್ತಿಯು ನಂದನವನಗಳಲ್ಲಿ ವಿಶ್ರಾಂತಿ ಪಡೆಯುವಾಗ ನಿವೇದನೆಗಳ ಏರ್ಪಾಡು ಮಾಡಬೇಕಾಗಿದ್ದಿತು ಈ ಮರಗಳ ಆದಾಯದಿಂದಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಹಲವಾರು ಆಭರಣಗಳನ್ನು ಮಾಡಿಸಿ ಅಲಂಕರಿಸಿರಬೇಕು (672 ತಿ.ತಿ) ಇಲ್ಲಿನ ಸನ್ಯಾಸಿ - ಜೀಯರು - ಆಲಯದಲ್ಲಿ ಹಲವು ಸೇವೆಗಳನ್ನು ಸಲ್ಲಿಸಿದ್ದಿರಬೇಕು ಹೀಗಾಗಿ ಸಿಂಗಯ ದಂಡನಾಯಕನು ಸ್ಥಾಪಿಸಿದ ಸಿತಕರ ಗಂಡನ್ ಮರವು ಶ್ರೀವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಗೋವಿಂದರಾಜಸ್ವಾಮಿಯವರ ಸೇವೆಯಲ್ಲಿ ಇಂದಿಗೂ ತೊಡಗಿರುವ ಜೀಯರು ಅಥವಾ ಜೀಯಂಗಾರರ ಮೂಲವನ್ನು ಗುರುತಿಸುವಲ್ಲಿ ನೆರವು ನೀಡುವುದು

(ಮುಂದಿನ ತಿಂಗಳು
- ವಿಜಯನಗರ ಕಾಲದಲ್ಲಿ ಆಲಯ)

* * *

# ವಾರ್ತಾಲಹರಿ



## ಶ್ರೀ ಪದ್ಮಾವತೀ ಅಮ್ಮನವರ ವಸಂತೋತ್ಸವ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ವಾರ್ಷಿಕ ವಸಂತೋತ್ಸವಗಳು ಏಪ್ರಿಲ್ 29 ರಿಂದ ಮೇ 1 ರ ವರೆಗೆ ಮೂರುದಿನಗಳ ಕಾಲ ವೈಭವೋಪೇತವಾಗಿ ನಡೆದವು. ಏಪ್ರಿಲ್ 29 ರಂದು ಗುರುವಾರ ಬೆಳಗ್ಗೆ ಬಂಗಾರದ ತಿರುಚ್ಚಿಯಲ್ಲಿ ಅಮ್ಮನವರ ಮೆರವಣಿಗೆಯಿಂದ ವಸಂತೋತ್ಸವಗಳು ಆರಂಭವಾದವು. ಸಾವಿರಾರು ಮಂದಿ ಭಕ್ತರು ಅಮ್ಮನವರನ್ನು ದರ್ಶಿಸಿ ಮನಸಾರೆ ಆರಾಧಿಸಿದರು

ಎರಡನೆಯ ದಿನ ಏಪ್ರಿಲ್ 30 ರಂದು ಶುಕ್ರವಾರ ಅಮ್ಮನವರ ರಥೋತ್ಸವ ನಡೆಯಿತು. ಸರ್ವಾಲಂಕಾರ ಭೂಷಿತೆಯಾದ ಅಮ್ಮನವರು ಬೆಳ್ಳಿಯ ರಥದಲ್ಲಿ ತಿರುಚಾನೂರು ಪುರಬೀಧಿಗಳಲ್ಲಿ ಚಿದ್ವಿಲಾಸದಿಂದ ಭಕ್ತರನ್ನು ಆಶೀರ್ವದಿಸುತ್ತ ನಡೆದಿರಲು, ಭಕ್ತರು ಆನಂದ ತುಂದಿಲರಾಗಿ ಅಮ್ಮನವರನ್ನು ಸ್ವಾಗತಿಸಿದರು

ಉತ್ಸವಗಳು ಮೇ 1 ರಂದು ಮುಕ್ತಾಯವಾದವು.

## ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು

ತಿ ತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿ ಮೇ 30 ಹಾಗೂ 31 ರಂದು ತಿರುಮಲೆಯಲ್ಲಿ ಮಂಡಳಿಯ ಅಧ್ಯಕ್ಷರಾದ ಕೆ ವೆಂಕಟ್ರಾವು ಅವರ ಅಧ್ಯಕ್ಷತೆಯಲ್ಲಿ ಸಮಾವೇಶವಾಗಿ ಹಲವಾರು ನಿರ್ಣಯಗಳನ್ನು ಕೈಗೊಂಡಿತು ಅವುಗಳಲ್ಲಿ ಕೆಲವು ಹೀಗಿವೆ -

* ತಿರುಪತಿಯ ಬಸ್ ನಿಲ್ದಾಣದ ಬಳಿಯ 13 ಎಕರೆ ಪ್ರದೇಶದಲ್ಲಿ 600 ಕೊರಡಿಗಳ ಬಹುಮಹಡಿಯ ಯಾತ್ರಿಕ ನಿವಾಸದೊಡನೆ ಯಾತ್ರಿಕ ಸೌಕರ್ಯ ಸಮುದಾಯವನ್ನು ನಿರ್ಮಿಸಲು 22 ಕೋಟಿ ರೂಪಾಯಿಗಳನ್ನು ಮಾಸಲಿಡಬೇಕೆಂದು ತೀರ್ಮಾನಿಸಲಾಗಿದೆ. ಇಲ್ಲಿ ಅತ್ಯಾಧುನಿಕ ಪರಿಕರಗಳನ್ನು ಹೊಂದಿದ ಸೌಲಭ್ಯಗಳನ್ನು, ಸುದರ್ಶನ ಟೋಕನ್ ವಿತರಣಾಕೇಂದ್ರವೂ ಇರುವಂತಹ ಯಾತ್ರಿಕೋಪಯೋಗಿ ಸೌಲಭ್ಯಗಳನ್ನು ಕಲ್ಪಿಸಲು ತೀರ್ಮಾನಿಸಲಾಗಿದೆ

* ಇಂತಹದೇ ಯಾತ್ರಿಕ ಸೌಲಭ್ಯ ಸಮುದಾಯಗಳನ್ನು ಚಂದ್ರಗಿರಿ ತಿರುಪತಿಯ ಬಳಸು ರಸ್ತೆಯಲ್ಲಿಯೂ, ಅಲಿಪಿರಿಯ ಬಳಿಯಲ್ಲಿಯೂ ನಿರ್ಮಿಸಲು ತೀರ್ಮಾನಿಸಲಾಗಿದೆ

* ಯಾತ್ರಿಕರ ಅನುಕೂಲಗಳನ್ನು, ಸುದರ್ಶನ ಟೋಕನ್ ವಿತರಣಾಕೇಂದ್ರಗಳನ್ನು ತೆರೆಯಲು 25 ಲಕ್ಷರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು

* ಶ್ರೀನಿವಾಸ ಮಂಗಾಪುರದ ಆಲಯದ ಬಲಿಪೀಠ, ಧ್ವಜಸ್ತಂಭಗಳ ಚಿನ್ನದ ಮುಲಾಮಿಕರಣಕ್ಕಾಗಿ 98 ಲಕ್ಷ ರೂಗಳನ್ನೂ, ತಿರುಮಲೆಯ ಆಲಯದ ಸಿಂಹವಾಹನದ ಚಿನ್ನದ ಮುಲಾಮಿಕರಣಕ್ಕೆಂದು 3 ಲಕ್ಷ ರೂಪಾಯಿಗಳನ್ನೂ ಮಂಜೂರು ಮಾಡಲು ತೀರ್ಮಾನಿಸಲಾಯಿತು

* ತಿರುಮಲೆಯ ಹಾದಿಯ ಗಾಳಿಗೋಪುರದ ಜೀರ್ಣೋದ್ಧಾರಕ್ಕೆ 13 ಲಕ್ಷ ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು

* ವಾಯಲ್ಪಾಡಿನ ಶ್ರೀ ಪಟ್ಟಾಭಿರಾಮ ದೇವಾಲಯದಲ್ಲಿ ಧ್ವಜಸ್ತಂಭ ಸ್ಥಾಪನೆಗೆ 1.75 ಲಕ್ಷರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು



## ಶ್ರೀ ಗೋವಿಂದರಾಜಸ್ವಾಮಿಯ ವೈಭವದ ಬ್ರಹ್ಮೋತ್ಸವಗಳು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿಯವರ ಆಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ಅತ್ಯಂತ ವೈಭವದಿಂದ ಮೇ ತಿಂಗಳ 22 ನೇ ಶನಿವಾರದಿಂದ 30 ರ ಭಾನುವಾರದ ವರೆಗೆ ಅತ್ಯಂತ ವೈಭವದಿಂದ ಘನವಾಗಿ ನಡೆದವು.

ಮೇ 21 ರಂದು ಬ್ರಹ್ಮೋತ್ಸವದ ಅಂಕುರಾರ್ಪಣೆ ನಡೆಯಿತು 22 ರಂದು ಶನಿವಾರ ಧ್ವಜಾರೋಹಣವಾಗಿ ಸ್ವಾಮಿಯನ್ನು ದೊಡ್ಡ ಶೇಷವಾಹನದಲ್ಲಿ ನಾಲ್ಕು ರಥ ಬೀದಿಗಳಲ್ಲಿ ಮೆರವಣಿಗೆಯಲ್ಲಿ ಕರೆದೊಯ್ಯಲಾಯಿತು. ತಿ ತಿ ದೇ ಆಸ್ಥಾನ ಪಂಡಿತರಾದ ಶ್ರೀ ಮಾಡಂಬಾಕಂ ಶ್ರೀನಿವಾಸ ಭಟ್ಟಾಚಾರ್ಯ, ಡೆ ಇ ಓ ಶ್ರೀ ಲಕ್ಷ್ಮೀಪತಿ, ಎ ಇ ಓ ಶ್ರೀ ಭಕ್ತವತ್ಸಲಂ ಮತ್ತಿತರ ಅಧಿಕಾರಿಗಳು ಭಾಗವಹಿಸಿದ್ದರು

ನಂತರದ ದಿನಗಳಲ್ಲಿ ಚಿಕ್ಕಶೇಷ, ಹಂಸ, ಸಿಂಹ, ಮುತ್ತಿನ ಚಪ್ಪರ, ಕಲ್ಪವೃಕ್ಷ, ಸರ್ವಭೂಪಾಲ, ಗರುಡ, ಹನುಮಂತ, ಗಜ, ಸೂರ್ಯ, ಚಂದ್ರ ಅಶ್ವವಾಹನಗಳಲ್ಲಿ ವೈಭವದಿಂದ ಮೆರವಣಿಗೆಯಲ್ಲಿ ಸ್ವಾಮಿಯನ್ನು ಕರೆತರಲಾಯಿತು

ಮೇ 29 ರಂದು ಶನಿವಾರ ಸ್ವಾಮಿಯ ರಥೋತ್ಸವ ಅಪಾರ ಜನವನ್ನು ಆಕರ್ಷಿಸಿತು. ಸಾವಿರಾರುಮಂದಿ ಸ್ವಾಮಿಯನ್ನು ದರ್ಶಿಸಿ ಆನಂದಿಸಿದರು. ಮೇ 30 ರಂದು ಚಕ್ರಸ್ನಾನದೊಡನೆ ಬ್ರಹ್ಮೋತ್ಸವಗಳು ಮುಗಿದವು.



## ಸ್ವಾಮಿ ಸುಪ್ರಭಾತ
## ಸಿ. ಡಿ. ಬಿಡುಗಡೆ

ಶ್ರೀ ವೆಂಕಟೇಶ್ವರಸ್ವಾಮಿಯ ಸುಪ್ರಭಾತದ ಆಡಿಯೋ ಕಾಂಪಾಕ್ಟ್ ಡಿಸ್ಕ್ (ಸಿ ಡಿ)ಯನ್ನು ಮೈಸೂರಿನ ದತ್ತಪೀಠದ ಶ್ರೀ ಶ್ರೀ ಗಣಪತಿ ಸಚ್ಚಿದಾನಂದ ಸ್ವಾಮಿಯವರು ಮೇ 21 ರಂದು ಶುಕ್ರವಾರದಂದು ಸ್ವಾಮಿ ಆಲಯದ ರಂಗನಾಯಕ ಮಂಟಪದಲ್ಲಿ ಬಿಡುಗಡೆ ಮಾಡಿದರು ರಿಯಾಯಿತಿ ದರದಲ್ಲಿ ರೂ 100/- ಕ್ಕೆ ದೊರೆಯುವಂತೆ ಏರ್ಪಾಡಾಗಿರುವ ಈ ಸಿ ಡಿ ಬಿಡುಗಡೆ ಮಾಡಿದ ನಂತರ ಪ್ರಥಮಪ್ರತಿಗಳನ್ನು ಸ್ವಾಮಿ ಜೀಯವರು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್, ತಿ ತಿ ದೇ ಧರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀ ಮಹದೇವನಾಯುಡು, ಆಂಧ್ರಪ್ರದೇಶ ಸರ್ಕಾರದ ನಿತ್ಯೋಪಯೋಗಿ ವಿತರಣಾಶಾಖಾಮಂತ್ರಿ ಡಾ|| ಪಟ್ನಂ ಸುಬ್ಬಯ್ಯ ಮೊದಲಾದವರಿಗೆ ನೀಡಿದರು ಕಾರ್ಯಕ್ರಮದಲ್ಲಿ ತಿ ತಿ ದೇ ರೆಕಾರ್ಡಿಂಗ್ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿಯವರು ಭಾಗವಹಿಸಿದ್ದರು



## ಮತ್ತೊಂದು ಉಚಿತ ಬಸ್

ತಿರುಪತಿಯಿಂದ ತಿರುಮಲೆಗೆ ಕಾಲುಹಾದಿಯಲ್ಲಿ ನಡೆದು ಅಲಿಪಿರಿಯ ಮೂಲಕ ಬೆಟ್ಟವನ್ನೇರುವವರ ಅನುಕೂಲಕ್ಕಾಗಿ ತಿ ತಿ ದೇವಸ್ಥಾನಗಳ ವತಿಯಿಂದ ಮತ್ತೊಂದು ಉಚಿತ ಬಸ್‌ನ ಏರ್ಪಾಡಾಗಿದೆ ರೈಲ್ವೆ ನಿಲ್ದಾಣದಿಂದ, ಕಪಿಲತೀರ್ಥದ ಮಾರ್ಗವಾಗಿ ಅಲಿಪಿರಿ ಸೇರುವ ಈ ಬಸ್ ಮೇ 24 ರಿಂದ ನಡೆಯುತ್ತಿದೆ ಉಚಿತ ಬಸ್‌ಗಳಲ್ಲಿ ಇದು ಮೂರನೆಯದಾಗಿದ್ದು, ತಿ ತಿ.ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯ ಅವರು ಇದನ್ನು ಪ್ರಾರಂಭಿಸಿದರು ತಿ ತಿ ದೇ ಪೌರ ಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಅವರು ಹಸಿರು ಬಾವುಟ ತೋರಿಸಿ ಬಸ್‌ನ ಓಡಾಟಕ್ಕೆ ಅನುವು ಮಾಡಿಕೊಟ್ಟರು

## ಶ್ರಮಶಕ್ತಿ ಪ್ರಶಸ್ತಿ

ತಿರುಮಲೆ ತಿರುಪತಿ ದೇವಸ್ಥಾನಗಳಲ್ಲಿ ಸೀನಿಯರ್ ಅಸಿಸ್ಟೆಂಟ್ (ಮೊದಲದರ್ಜೆಯ ಗುಮಾಸ್ತರು) ಕೆಲಸಮಾಡುತ್ತಿರುವ ಶ್ರೀ ಬಿ ಪಿ ರೆಡ್ಡಿ ಅವರಿಗೆ ಈ ವರ್ಷದ ಮೇ ದಿನಗಳ ಆಚರಣೆಯ ಅಂಗವಾದ ಶ್ರಮಶಕ್ತಿ ಪ್ರಶಸ್ತಿ ಲಭಿಸಿದೆ ಪ್ರತಿವರ್ಷ ಮೇ ದಿನಾಚರಣೆಯಂದು ಆಂಧ್ರಪ್ರದೇಶ ಸರಕಾರದ ಕಾರ್ಮಿಕ ವಿಭಾಗದವರು ಈ ಪ್ರಶಸ್ತಿಯನ್ನು ನೀಡುತ್ತಾರೆ ಶ್ರೀ ಬಿ ಪಿ ರೆಡ್ಡಿ ಅವರು ಈ ವರ್ಷದ ಪ್ರಶಸ್ತಿಯನ್ನು ವಿಶಾಖ ಪಟ್ಟಣದಲ್ಲಿ ನಡೆದ ಮೇ ದಿನಾಚರಣೆಯ ಸಭೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಚಂದ್ರಬಾಬುನಾಯುಡು ಅವರಿಂದ ಸ್ವೀಕರಿಸಿದರು

## ಉನ್ನತ ವೇದ ವಿದ್ಯಾಸಂಸ್ಥೆ
## ಮಹಾನಿರ್ದೇಶಕರಾಗಿ
## ಡಾ|| ಎಸ್. ಬಿ. ರಘುನಾಥಾಚಾರ್ಯ

ತಿರುಮಲೆ ತಿರುಪತಿ ದೇವಸ್ಥಾನಗಳು ಸ್ಥಾಪಿಸುತ್ತಿರುವ ಶ್ರೀ ವೆಂಕಟೇಶ್ವರಸ್ವಾಮಿ ಉನ್ನತ ವೇದ ವಿದ್ಯಾಸಂಸ್ಥೆಯ ಮಹಾ ನಿರ್ದೇಶಕರಾಗಿ ಡಾ|| ಎಸ್ ಬಿ ರಘುನಾಥಾಚಾರ್ಯ ನಿಯಮಿತರಾಗಿದ್ದಾರೆ ಶ್ರೀಯುತರು ಮೇ 11 ರಂದು ಮಂಗಳವಾರ ಬೆಳಗ್ಗೆ ತಿ ತಿ ದೇ ಪರಿಪಾಲನಾಭವನದಲ್ಲಿ ತಮ್ಮ ಪದವಿ ಬಾಧ್ಯತೆಯನ್ನು ಸ್ವೀಕರಿಸಿದರು

## ತಿರುಮಲೆಯಲ್ಲಿ ಪ್ರಧಾನಮಂತ್ರಿ

ಭಾರತದ ಪ್ರಧಾನಮಂತ್ರಿ ಶ್ರೀ ಅಟಲಬಿಹಾರಿ ವಾಜಪೇಯಿ ಅವರು ಮೇ ತಿಂಗಳ 26 ನೇ ತಾರೀಖಿನ ಬುಧವಾರ ಸಾಯಂಕಾಲ ತಿರುಮಲೆಯಲ್ಲಿ ಸ್ವಾಮಿಯನ್ನು ದರ್ಶಿಸಿ ಪೂಜೆ ಸಲ್ಲಿಸಿದರು ಪ್ರಧಾನ ಮಂತ್ರಿಗಳಿಗೆ ಆಲಯ ಸಂಪ್ರದಾಯದಂತೆ ಇಸ್ತಿಕಪಾಲ ಸ್ವಾಗತ ನೀಡಲಾಯಿತು ಆಲಯದಲ್ಲಿ ಅರ್ಚಕರು ಪ್ರಧಾನಿಗಳಿಗೆ ಶ್ರೀ ವೆಂಕಟೇಶ್ವರ ವೈಭವವನ್ನು ವಿವರಿಸಿದರು ಸುಮಾರು 20 ನಿಮಿಷಗಳ ಕಾಲ ಪ್ರಧಾನಮಂತ್ರಿಗಳು ಆಲಯದಲ್ಲಿದ್ದರು

ಶ್ರೀರಂಗನಾಯಕ ಮಂಟಪದಲ್ಲಿ ಪ್ರಧಾನ ಮಂತ್ರಿಗಳಿಗೆ ವೇದಪಂಡಿತರು ವೇದಾಶೀರ್ವಾದ ನೀಡಿದರು ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ಪ್ರಧಾನಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳನ್ನೂ, ಕ್ಯಾಸೆಟ್‌ಗಳನ್ನು ಬಹೂಕರಿಸಿದರು ಪ್ರಧಾನಮಂತ್ರಿಗಳನ್ನು ಶೇಷವಸ್ತ್ರದಿಂದ ಸನ್ಮಾನಿಸಲಾಯಿತು

ಪ್ರಧಾನಮಂತ್ರಿಗಳೊಂದಿಗೆ ಕೇಂದ್ರ ಮಂತ್ರಿಗಳು ಶ್ರೀ ಮುರಳೀಮನೋಹರ ಜೋಷಿ, ಶ್ರೀ ಪ್ರಮೋದ ಮಹಾಜನ್, ಶ್ರೀ ಭಂಡಾರು ದತ್ತಾತ್ರೇಯ, ಬಿ ಜೆ ಪಿ ಪ್ರಧಾನ ಕಾರ್ಯದರ್ಶಿ ಶ್ರೀ ವೆಂಕಯ್ಯ ನಾಯುಡು, ಶ್ರೀ ಸಿ ಎಚ್ ವಿದ್ಯಾಸಾಗರ ರಾವು ಮೊದಲಾದವರು ಇದ್ದರು

ಪ್ರಧಾನ ಮಂತ್ರಿಗಳಿಗೆ ಪದ್ಮಾವತೀ ಅತಿಥಿ ಗೃಹದ ಬಳಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ, ಆಂಧ್ರಪ್ರದೇಶ ಸರ್ಕಾರದ ಪರವಾಗಿ ಮಂತ್ರಿ ಡಾ|| ಪಟ್ಟಂ ಸುಬ್ಬಯ್ಯ ಮೊದಲಾದವರು ಸ್ವಾಗತವನ್ನು ಕೋರಿದರು





## ಅನ್ನಮಾಚಾರ್ಯ ಜಯಂತಿ ಉತ್ಸವಗಳು

ಆಂಧ್ರ ಸಾಹಿತ್ಯದ ಪದಕವಿತಾ ಪಿತಾಮಹರೆಂದು ಹೆಸರಾಗಿ ತಿರುಮಲೆಯ ಸ್ವಾಮಿಯನ್ನು ಮೂವತ್ತೆರಡು ಸಾವಿರ ಕೀರ್ತನೆಗಳಿಂದ ಸ್ತುತಿಸಿ ಕೀರ್ತಿಶೇಷರಾದ ಅನ್ನಮಾಚಾರ್ಯರ 591 ನಯ ಜಯಂತಿ ಉತ್ಸವವನ್ನು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಮೇ 1 ರಿಂದ ಮೂರುದಿನಗಳ ಕಾಲ ಅತ್ಯಂತ ಘನವಾಗಿ ನಡಸಲಾಯಿತು ಮೂರು ದಿನದ ಉತ್ಸವ ಕಾರ್ಯಕ್ರಮಗಳನ್ನು ಕಾರ್ಯ ನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ಆರಂಭಿಸಿದರು ಮೊದಲಿಗ ತಿ ತಿ ದೇ ಪರಿಪಾಲನಾ ಭವನದಿಂದ ಅನ್ನಮಾಚಾರ್ಯ ಕಲಾಮಂದಿರದ ವರೆಗೆ ಮೆರವಣಿಗೆ ನಗರ ಸಂಕೀರ್ತನೆಗಳು ನಡದವು, ಖ್ಯಾತ ಗಾಯಕ ಗಾಯಕಿಯರು ಈ ನಗರ ಸಂಕೀರ್ತನಯಲ್ಲಿ ಭಾಗವಹಿಸಿದ್ದರು ನಂತರ ಸಂಗೀತ ಉಪನ್ಯಾಸ ವಿಚಾರಸಂಕಿರಣಗಳು ನಡೆದವು



## ಶಿಲಾ ತೋರಣೋದ್ಯಾನ

ತಿರುಮಲೆಯ ಧರ್ಮಗಿರಿ ರಸ್ತೆಯಲ್ಲಿರುವ ಶಿಲಾ ತೋರಣದ ಬಳಿ ತಿ ತಿ ದೇವಸ್ಥಾನಗಳ ಉದ್ಯಾನವನವನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ಮೇ 21 ರಂದು ಬೆಳಗ್ಗೆ ಆರಂಭಿಸಿದರು ತಿ. ತಿ ದೇ ಗಳವರು ಯಾತ್ರಿಕರ ಸೌಕರ್ಯಾರ್ಥ ಶಿಲಾತೋರಣದ ಬಳಿಯ ಉದ್ಯಾನವನವನ್ನು ವಿಶ್ರಾಂತಿ ಘಟ್ಟವನ್ನು ಏರ್ಪಾಡು ಮಾಡಿದ್ದಾರೆ ಇಲ್ಲಿನ ಶಿಲಾತೋರಣ ಹಲವು ಸಾವಿರ ವರ್ಷಗಳ ಹಿಂದೆ ಸಹಜವಾಗಿ ಏರ್ಪಾಡಾದದ್ದು

ಇಲ್ಲಿನ ವಿಶ್ರಾಂತಿ ಕೇಂದ್ರವನ್ನು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಪ್ರಾರಂಭಿಸಿದರು ಉದ್ಯಾನವನವನ್ನು ಸಾರ್ವಜನಿಕರಿಗಾಗಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವು ಅವರು ಉದ್ಘಾಟಿಸಿದರು

ಈ ಕಾರ್ಯಕ್ರಮದಲ್ಲಿ ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಆರ್ ರಾಮಕೃಷ್ಣಯ್ಯ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ವಿ ವೆಂಕಟ್ರಾಮಯ್ಯ ತಿರುಮಲೆ ಡಿ ಎಚ್ ಓ ಶ್ರೀ ಸುಬ್ಬಾರೆಡ್ಡಿ ತಿರುಪತಿ ಡಿ ಎಫ್ ಓ ಶ್ರೀ ಶ್ರೀನಿವಾಸಶಾಸ್ತ್ರಿ ಫಾರೆಸ್ಟ್ ರೇಂಜರ್‌ಗಳಾದ ಸರ್ವಶ್ರೀ, ರಾಮದಾಸು, ನಾರಾಯಣರೆಡ್ಡಿ, ಓಬುಲ್ ರೆಡ್ಡಿ, ಲಕ್ಷ್ಮೀಪತಿ, ವೆಂಕಟರಮಣ, ರವಿಸಿಂಹಮೂರ್ತಿ, ಪಿ ಆರ್ ಓ ಶ್ರೀ ಸುಭಾಷ್‌ಗೌಡ್, ಆರೋಗ್ಯಾಧಿಕಾರಿ ಶ್ರೀ ಬಾಲಯ್ಯ ಗಾರ್ಡನ್ ಸೂಪರಿಂಟೆಂಡೆಂಟ್ ಶ್ರೀ ನಾಥಮುನಿರೆಡ್ಡಿ ಮತ್ತಿತರರು ಭಾಗವಹಿಸಿದ್ದರು



ನಂತರ ಅರಣ್ಯ ವಿಭಾಗದವರು ಏರ್ಪಡಿಸಿದ್ದ ವಾಟರ್ ಷೆಡ್ ಪರಿಚಾಯಿಕೆಯನ್ನು ಡಾ|| ಐ ವಿ ಸುಬ್ಬಾರಾವು ಬಿಡುಗಡೆ ಮಾಡಿದರು ಉದ್ಯಾನ ವನಗಳ ಪರಿಚಾಯಿಕೆಯನ್ನು ಜೆ ಇ ಓ. ಶ್ರೀ ಬಾಲಸುಬ್ರಹ್ಮಣ್ಯಂ, ಅರಣ್ಯ ಇಲಾಖೆಯ ಪರಿಚಾಯಿಕೆಯನ್ನು ಜೆ ಇ ಓ ಶ್ರೀ ರಾಮಕೃಷ್ಣಯ್ಯನವರು ಬಿಡುಗಡೆ ಮಾಡಿದರು

ಇದೇ ದಾರಿಯಲ್ಲಿ ತಿ ತಿ ದೇ ಅರಣ್ಯ ಇಲಾಖೆಯವರು ಏರ್ಪಡಿಸಿರುವ ಸ್ವಾಮಿ ಶಿಖರ ದರ್ಶಿನಿ -(ಗುಡಿಯ ಗೋಪುರವನ್ನು ಕಾಣುವ ಮಂಟಪ) ಯಾತ್ರಿಕರನ್ನು ಆಕರ್ಷಿಸುವಂತಿದೆ ಇಲ್ಲಿಂದ ತಿರುಮಲೆಯ ವನಾಚ್ಛಾದನೆಯನ್ನು, ಸ್ವಾಮಿಯ ಆಲಯವನ್ನು ನೋಡುವುದು ಆನಂದದಾಯಕವಾಗಿರುತ್ತದೆ

## ತಿರುಪತಿಯಲ್ಲಿ ಸುದರ್ಶನ ಟೋಕನ್ ಕೇಂದ್ರ

ತಿರುಮಲೆಯ ಸ್ವಾಮಿ ದರ್ಶನದ ಸಮಯವನ್ನು ಸೂಚಿಸುವ ಕಂಕಣದ ರೀತಿಯ ಟೋಕನ್‌ಗಳನ್ನು ಕಂಪ್ಯೂಟರಿನ ಮೂಲಕ ನೀಡುವ ಕೇಂದ್ರವನ್ನು ತಿರುಪತಿಯ ರೈಲ್ವೆ ನಿಲ್ದಾಣದ ದಕ್ಷಿಣಕ್ಕಿರುವ ಕೇಂದ್ರ ಸ್ವಾಗತ ಕಚೇರಿಯಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ ಅವರು ಉದ್ಘಾಟಿಸಿದರು ಈ ಪದ್ಧತಿಯಿಂದಾಗಿ ದರ್ಶನಕ್ಕೆ ಒಂದೆರಡು ಗಂಟೆ ಮುಂಚೆ ತಿರುಮಲೆಯ ಆಲಯದ ಬಳಿಯ ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ತಲುಪಿದರೂ ಸಾಕು - ಸ್ವಾಮಿದರ್ಶನವನ್ನು ಯಾತ್ರಿಕರು ಅನಾಯಾಸವಾಗಿ ಪಡೆಯಬಹುದು. ತಮಿಳುನಾಡಿನ ಯಾತ್ರಿಕ ಭಕ್ತರಿಗೆ ಈ ಟೋಕನ್ ನೀಡುವ ಮೂಲಕ ಆರಂಭಿಸಲಾದ ಈ ಕೇಂದ್ರ ಉದ್ಘಾಟನಾ ಸಮಾರಂಭದಲ್ಲಿ ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯ ತಿ ತಿ ದೇ ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಮೊದಲಾದವರು ಉಪಸ್ಥಿತರಿದ್ದರು

Edited and Published on behalf of T T Devasthanams by Dr N S Rama Murthy, M A , and Printed at T T D Press by M Lakshmana Rao, M A , L P T , Manager, T T D Press, Tirupati - 517 507



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಭಿವೃದ್ಧಿಯೋಜನೆಯ ಹಲವು ವಿವರಗಳು ಹೀಗೆ ಇವೆ

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಒಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು

ಪ್ರಯೋಜನಗಳು
* ತೋಪಿಗ ದಾನಿಯ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ

ದಾನದ ಮೊಬಲಗು **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳೆಸುವ ಯೋಜನಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ - ಇವರ ಹಸರಿಗ ಡಿ ಡಿ ಯ ರೂಪದಲ್ಲಿ ಕಳುಹಿಸಿ

**ಕಾರ್ಯನಿರ್ವಹಣಾಧಿಕಾರಿ.**

* * * * *

